"Service of the Poor is the Service of God".

ಓಂ

BADAVARA BANDHU

# ಬಡವರಬಂಧು

EDITOR:—MANGALORE JARAPPA. ASSOCIATE EDITOR:—B. NARSAPPA.

A HIGH CLASS RUPEE-MAGAZINE TO SUIT ALL INTERESTS.

ವಾರ್ಷಿಕ ಚಂದಾ ಒಂದು ರೂಪಾಯಿ ಮಾತ್ರ!!! ಅಂಚೆವೆಚ್ಚ ನಾಲ್ಕಾಣೆ.

ಭಿನ್ನರುಚಿಗೊಪ್ಪುವ ಕನ್ನಡ ಮಾಸಪತ್ರಿಕೆ. [ ಬಿಡಿ ಸಂಚಿಕೆ ಆಣೆ ೦—೧—೬.

"ಬಡವರ ಬಂಧು"ವಿನಲ್ಲಿ ಉಚ್ಚ ತರಗತಿಯ ಸಣ್ಣ ಕಥೆಗಳೂ, ಪದ್ಯಗಳೂ, ಧಾರ್ಮಿಕ ನೈತಿಕ ವಿಚಾರಗಳನ್ನೊಳಗೊಂಡ ಲೇಖಗಳೂ ಬರುವುವು. ಪತ್ರವ್ಯವಹಾರ, ಹಾಸ್ಯ, ವಿಮರ್ಶೆ, ಒಗಟು, "ಟಿಟ್‌ಬಿಟ್ಸ್," ಒಳದೇಶವಿದೇಶ ವಾರ್ತೆಗಳೂ ಕೊಡಲ್ಪಡುವುವು.

ಇಂತಹ ಅಮೂಲ್ಯ ಮತ್ತು ಅತೀ ಅಗ್ಗವಾದ ಮಾಸಿಕಪತ್ರಿಕೆಯನ್ನು

"ಬಡವರಬಂಧು" ಕಾರ್ಯಾಲಯ, ಹಂಪನಕಟ್ಟೆ, ಮಂಗಳೂರು, ಇಲ್ಲಿಂದ ತರಿಸಿಕೊಳ್ಳಿರಿ.

| ಸಂಪುಟ ೧ | ತಾರೀಕು ೧ನೇ ಮಾರ್ಚಿ ೧೯೩೩. | ಸಂಚಿಕೆ ೧೧ |
|---|---|---|

## ತಟ್ಟೆಯ ಜೋಗುಳ.

ಅಳಬೇಡ ಕಂದಮ್ಮ ಅಳಬೇಡ ನನ್ನಮ್ಮ
ನಿನಗೀಗ ಕೊಡಲು ರೊಟ್ಟಿಲ್ಲ ಮನೆಯೊಳಗೆ
ಮಲೆಯೊಳಗೆ ಕಂದ ಹಾಲಿಲ್ಲ!
ಸುಮ್ಮನೆ ಮಲಗಪ್ಪ ಹೊತ್ತಿನ್ನು ಬಹಳಿಹುದು
ನರಿಗೂಗಿ ನಾಯಿ ಒದರುವುದು ಕೇಳುವುದು
ಉಂಡವರು ಗಡದು ಮಲಗಿಹರು!
ದೇಸ್ರಾಯ ಮನೆಯವರು ಕದವೀಗ ಹಾಕುವರು
ಸಪ್ಪಳವ ಕೇಳ ನನಕೂಸ ಕಣ್ಮುಚ್ಚು
ಸವರಾತ್ರಿಗೀಗ ಬಂದಿಹುದು!
ಬೆಳಕಿಲ್ಲೆ ಬಿದ್ದಿಹುದು ನಮ್ಮಂತೆ ನಿದ್ರಿರದ
ತಾರೆಗಳ ಬೆಳಕು ಬಾಯ್ಮುಚ್ಚಿ ಗಳಿಗ್ಗೊತ್ತು
ಸಮ್ಮನ ಮಲಗೂ ಕಂದಯ್ಯ
ನಿನ್ನಂತೆ ಕೂಳಿಗದ ಇಲಿಬುಡಕ ಮನೆಯೆಲ್ಲ
ಸುತ್ತಾಡಿ ಏನು ಸಿಗದಿರಲು ಚೀರುತ್ತ
ಬರುತಿಹುದು ಹೊಟ್ಟೆ ಒಸೆಯುತ್ತ!
ಇಪ್ಪೊತ್ತು ಗಾಳಿಯೊಳು ಗದಗದನೆ ನಡಗುತ್ತ
ಹಡೆದಾತ ನಿನ್ನ ಹಸಿದಿರುವ ಹೊಟ್ಟೆಯೊಳು
ಕಾಲಿಟ್ಟು ಈಗ ಮಲಗಿಹನು!
ದಿನದಿನದಿ ಕೂಳಿರದೆ ದುಡಿದುಡಿದು ಬಡಕಾದ
ಮಲಗತಾ ಆತ ಚಿಂತೆಯನು ಚಣ ಮರೆತು
ಅಳಬೇಡ ಕಂದ ಸುಮ್ನಾಗ
ದಿನವೊಂದು ರೊಟ್ಟಿಯೊಳು ದಿನವಾರು ಕಳೆದಿಹೆನು
ಹಾಲೆಂತು ಮೊಲೆಗೆ ಬಂದಾವು ಒಣಮೊಲೆಯು
ಉರಿತಾವ ಬಿಟ್ಟು ಮಲಗಯ್ಯ
ಅಳಬೇಡೆ ನಮ್ಮಪ್ಪ! ಅಯ್ಯೊಯ್ಯೊ ಅತ್ತತ್ತು
ಬಾತಿಹವು ಕಣ್ಣು ಶಿರವುಬ್ಬಿ ಕಾಣುವುದು
ನನಜೀವ, ಸರವು ಒಡೆದಿಹುದ s!
ಅಳಬೇಡ ಬಾಯ್ಮುಚ್ಚಿ ನನಜೀವ ನನದೇವ
ಹೊಟ್ಟುಬ್ಬಿ ಉಸಿರು ಕಟ್ಟಿಹುದು, ಬಾಯ್ಮುಚ್ಚೆ
ಬರಿಗರುಳು ನಿನ್ನ ಹರಿದಾವು!!
ತಣ್ಣೀರ ಉಗ್ಗಿದೊಲು ತಂಡಿಟ್ಟು ಬೀಸುವದು
ಹೊಟ್ಟೆಯೊಳು ಕಂದ ಬಾರಿಲ್ಲೆ ಎದೆಸೆರಗ
ಹೊಚ್ಚುವೆನು ಸುಮ್ನು ಮಲಗಯ್ಯ!

ಕನ್ನಡಕಂದ, (ತುಂಗಭದ್ರಾ.)

"ಬಡವರ ಸೇವೆಯೇ ಭಗವಂತನ ಸೇವೆ."




ಸಂಪುಟ ೧. | ತಾರೀಕು ೧ನೇ ಮಾರ್ಚಿ ೧೯೩೩. | ಸಂಚಿಕೆ ೧೧.

# ಮಹಾಶಯರಾದ ಚಂದಾದಾರರಲ್ಲಿ ವಿನಂತಿ.

ಇದು 'ಬಡವರ ಬಂಧು'ವಿನ ಹನ್ನೊಂದನೇ ಸಂಚಿಕೆ. ಇನ್ನು ಎಪ್ರಿಲ್ ಸಂಚಿಕೆಯೊಂದನ್ನು ಸಲ್ಲಿಸಿದರೆ, ವರ್ಷಾರಂಭದಲ್ಲಿ ಚಂದಾದಾರರಾದವರ ಋಣದಿಂದ ನಾವು ಮುಕ್ತರಾದಂತಾಗುವೆವು.

ಎರಡನೇ ಸಂಪುಟದ ಒಂದನೇ ಸಂಚಿಕೆಯನ್ನು **ವಿಶೇಷ ಸಂಚಿಕೆ**ಯನ್ನಾಗಿ ಮುದ್ದಾದ ಮುದ್ರಣ, ಮನೋಹರವಾದ ಚಿತ್ರ, ತಜ್ಞರ ಲೇಖನ ಮೊದಲಾದುವುಗಳಿಂದ ಸೌಂದರ್ಯ ಸಂಪನ್ನವಾಗುವಂತೆ ವಿರಚಿಸಬೇಕೆಂದಿರುವೆವು. ಇದು **ಜೂನ್ ತಿಂಗಳ ಒಂದನೆ ತಾರೀಕಿಗೆ** ತಪ್ಪದೆ ಹೊರಬೀಳುವುದು.

ದ್ವಿತೀಯ ವರ್ಷದ ಪ್ರಥಮ ವಿಶೇಷ ಸಂಚಿಕೆಯನ್ನು ಪರಸ್ಥಳದವರ ಲೇಖನ, ಚಿತ್ರ, ಜಾಹೀರಾತುಗಳನ್ನೊಳಗೊಂಡು ಸಿದ್ಧಿಸಿ, ಸುಂದರಗೊಳಿಸಿ, ಪ್ರಕಟಿಸಲಿರುವುದರಿಂದ ಮೇ ತಿಂಗಳೊಂದನ್ನು ನಾವು ಅದರ ರಚನೆಗಾಗಿ ವಶೀಕರಿಸಿ ವ್ಯಯಮಾಡಬೇಕಾಗಿದೆ. ಅಂದರೆ, **ಮೇ ತಿಂಗಳಲ್ಲಿ ಯಾವ ಸಂಚಿಕೆಯು ಹೊರಡುವುದಿಲ್ಲ.**

ಎರಡನೆಯ ವರ್ಷದಲ್ಲಿ ಆರೆಂಟು ಸಾವಿರ ಚಂದಾದಾರರನ್ನಾದರೂ ಸಂಪಾದಿಸಬೇಕೆಂದೂ, ಆ ಬಗ್ಗೆ ನಮ್ಮ ಪ್ರತಿನಿಧಿಗಳು ಸಮಸ್ತ ಕರ್ನಾಟಕದಲ್ಲಿ ಸಂಚರಿಸಬೇಕೆಂದೂ ನಮ್ಮ 'ಬಡವರ ಕೂಟ'ದ ಸದಸ್ಯರು ನಿರ್ಧರಿಸಿರುತ್ತಾರೆ. ಪ್ರತಿಯೊಬ್ಬ ಕನ್ನಡಿಗನೂ "ಬಡವರ ಬಂಧು"ವನ್ನು ಓದುವಂತೆ ಮಾಡಬೇಕೆಂಬುದೇ ಒಂದು ಗೊತ್ತಿನ ಗುರಿಯಾಗಿರುತ್ತದೆ.

ಈ ಸಂದರ್ಭದಲ್ಲಿ ನಾವು ಈ ವರ್ಷದ ಪ್ರತಿಯೊಬ್ಬ ಚಂದಾದಾರರಲ್ಲಿ ಒಂದು ವಿಷಯವನ್ನು ವಿನಂತಿಸಿಕೊಳ್ಳಬೇಕೆಂದಿರುತ್ತೇವೆ: **ತಾವು ಪ್ರಥಮ ವರ್ಷದಲ್ಲಿ 'ಬಡವರ ಬಂಧು'ವನ್ನು ಉದಾತ್ತಭಾವದಿಂದ ಪ್ರೋತ್ಸಾಹಿಸಿದಿರಿ; ದ್ವಿತೀಯ ವರ್ಷದಲ್ಲೂ ಚಂದಾ ಹಣದ ಮೇಲೆ ಆಶೆಯನ್ನಿಡದೆ ಅದನ್ನು 'ಬಡವರ ಬಂಧು'ವಿನ ಜೀವಿತಕ್ಕಾಗಿ ಮಮತೆಯಿಂದ ವೆಚ್ಚ ಮಾಡಬೇಕು; ತಮ್ಮ ಮಿತ್ರರೂ ಈ ವಿಷಯವಾಗಿ ತಮ್ಮಂತೆ ಮಾಡುವಂತೆ ಪ್ರೇರೇಪಿಸಬೇಕು—ಅಷ್ಟೆ!**

ಮನವಿತ್ತರೆ ಕನ್ನಡಿಗರು ಯಾವುದರಲ್ಲೂ ಹಿಂದಲ್ಲವೆಂಬ ವಿಷಯವು ಲೋಕವಿದಿತವಿದೆ. **'ಬಡವರ ಬಂಧು'ವಿಗೆ ಮೂವತ್ತು ದಿನಗಳಿಗೊಮ್ಮೆ ನಾಲ್ಕು ದುಡ್ಡುಗಳನ್ನು ಅವರು ವ್ಯಯಿಸುವುದು ವಿಶೇಷ ನಷ್ಟವೆಂದು** ಪರಿಗಣಿಸಲಿಕ್ಕಿಲ್ಲವೆಂದರೆ ದೊಡ್ಡ ಮಾತಾಗಬಹುದೇ?

ಎರಡನೆಯ ವರ್ಷಕ್ಕೆ ಚಂದಾದಾರರಾಗಬೇಕೆಂದು ಪ್ರಾರ್ಥಿಸಿಕೊಂಡು ಈ ಸಲದ ಸಂಚಿಕೆಯಲ್ಲಿ ಅನೇಕರಿಗೆ ಸೂಚನಾಪತ್ರವನ್ನು ಕಳುಹಿಸಿರುತ್ತೇವೆ. ಅಂತಹ ಪತ್ರವು ತಲಪಿದೊಡನೆ **ಗ್ರಾಹಕ ಮಹಾಶಯರುಗಳು ತಮ್ಮ ಚಂದಾ ಹಣ (ರೂ. 1-4-0)**

(೩ನೇ ಪುಟಕ್ಕೆ ಮುಂದರಿಸಿಯದೆ.)

## ಉಚಿತ!!




### ಇದೋ ನೋಡಿ! ಇದೋ ನೋಡಿ!

**'ಬಡವರ ಬಂಧು'ವಿನ ಪ್ರಥಮವರ್ಷೋತ್ಸವವು ಅತೀ ವಿಜೃಂಭಣೆಯಿಂದ ಜರಗಲಿರುವುದು.**

ಇದರ ಸ್ಮರಣೆಗಾಗಿ ನಮ್ಮ ವರ್ಷಾಂತ್ಯವಾಗುತ್ತಲೇ ಸುಮಾರು ಎಂಟಾಣೆ ಕ್ರಯ ಬಾಳುವ ಒಂದು ಸಚಿತ್ರ ವಿಶೇಷ ಸಂಚಿಕೆಯನ್ನು ಹೊರಡಿಸಿ, ನಮ್ಮ ಸಾವಿರಾರು ಚಂದಾದಾರರಿಗೂ ಉಚಿತವಾಗಿ ಹಂಚಲಿರುವೆವು.

**ಗಣ್ಯಲೇಖಕರ ಬರೆಹ! ಚಿತ್ರಪಟಗಳ ಸುಗ್ಗಿ!**

ಈ ತಿಂಗಳೊಳಗೆ ಚಂದಾದಾರರಾಗುವವರಿಗೆ ನಾಲ್ಕಾಣೆ ಕ್ರಯದ ಒಂದು ಉತ್ತಮ ಪದ್ಯಗ್ರಂಥವು ಉಚಿತ!

ಕೂಡಲೇ ಮನಿಯಾರ್ಡರ್ ಮಾಡಿರಿ! ವಿ. ಪಿ.ಗೆ ಆರ್ಡರು ಕೊಡಿರಿ.

**ಜಾಹೀರಾತಿಗೆ ಸುಸಂಧಿ!**

ಮೆನೇಜರ್,
'ಬಡವರ ಬಂಧು' ಮಂಗಳೂರು

# DARSHAN OF THE BELOVED.

(Kind contribution of Sadhu Sivaprasad.)

I was then a mad wanderer. With one piece of loin-cloth and a warm kambal, I left home in my twentieth year in quest of the Beloved. I was not satisfied with book-knowledge. I wanted to see Him face to face; realise Him for myself. From my childhood days I was a believer in the One God. I therefore, worshipped Him in front of Muslim mosques and Hindu temples. I did not care to enter into these places of worship, for I knew that God is everywhere. Yet I was not satisfied by these intellectual gymnastics. Ram, Rahim, Brahma, Siva, & Vishnu were to me one and the same and I worshipped one and all as the All in All. One *manthra* that I muttered always was *Hari Om, Alla Om.* Truth is One; Sages name Him in various ways said the Rig Veda. I knew that He was *Satiam*—Truth, *Sivam*—Ever blissful. *Sundaram*—the beautiful. I loved Him with all my might, I sang His Name in great ecstacy. I sang his hymns, though I knew Him to be infinite. (*Anantham*) and not limited by time, space, and causation. Yet I was out to realise Him. I did not give up the mad search. I knew that He was not confined to any one place or to any purticular body of flesh. Yet I longed to see Him one day in all the sweetness of a mad lover. I knew that He did not require incense or flowers from me. Yet I indulged in offering gifts of flowers and incense at the gates of all temples in my Motherland. I knew that He was beyond the *Maya* of praise and blame. Yet I was mad in chanting hymns of praises to the Beloved of my heart. Oh! what a terrible contradiction this? I was myself a wonderful riddle to me. My head rebelled! But my heart loved! The heart almost always made the hands do its behest and the head watched the mad workings with a philosopher's smile. 'Where from are you Sadhujee? Whither are you drifting?' asked the inquisitive passers by. I answered them with a silent smile. They were more than satisfied at times. Some presented me articles of food and drink. Some grew wild and called me names. Some threatened and percecuted me in order to break my Vow of silence. These were then of no consequence to me for I was after the coveted "*Darshan*" of my Beloved. The very thought of the Beloved made my hairs to stand on end and the sweet names brought out tears of joy from my eyes. What beautiful days were they! The times of mad search after the Beloved!—the enchanter of this simple and loving heart. Oh! I wish once more to get back those simple youthful days. Every minute was then a moment of hope and cheer to me, for I knew "He will soon come" It was in the valley deep of the Himalayan heights!—between two gigantic hills. All round the forests were silent. I could hear even the slow beatings of my heart. I was experiencing tremendous loneliness. Even the trees seemed to deliver some Sermons of Peace. I was at the stream's edge—at the confluence of Nandakini and Mandakini in Nandaprayaga.

It was one fine morning—the 1st of August 1914. I was busy turning my beads. I was sitting cross legged after a plunge in the holy waters. Lo! a Sadhu radiant as the Rising Sun was before me! He smiled at me like a god, and approached me with an air of extreme kindness and benevolence. His eyes were remarkable. He had a radiance of spirituality round about him. Was He a messenger from the Beloved! I wondered; I stood up with folded hands and bowed low before Him. "I was in search after you!" he said and warmly embraced me and made me sit beside Him. My joy knew no bounds, my heart was full and tears were in my eyes. 'Stop all this chanting and singing and turning of beads. The Beloved is verily within the precincts of your own Temple. Sit beside me and hear the sweet music of the Silent Sanctuary of the Self" He said. Yes! He muttered into my ears the sacred *Manthra* "Om Tat Twam Asi". I was soon in samadhi–I knew nothing else afterwards. When I rose up, I found the limpid waters of river Mandakini wispering the same *Manthra* "Om Tat Twam Asi and Om Tat Sat Om, Sivaham. Sivaham!"

# ಹೊಟ್ಟೆಗಾಗಿ....

ಲೇಖಕ:—ಮ. ಚಾ.



ಕಾಶಿಯೆಂದರೆ ಅತ್ಯಂತ ಪಾವನ ಕ್ಷೇತ್ರ. ಇಂದ್ರ ಲೋಕವೇ ಅದು! ಅಂತಹ ಪಾವನ ಕಾಶಿಗೆ ನಾನೊಮ್ಮೆ ಹೋಗಿದ್ದೆ.

ಈ ಘಟನೆಯನ್ನು ಬಯಲಿಗೆಳೆದು ನಮ್ಮ ಸಮಾಜಕ್ಕೆ, ವ್ಯಾಪಾರಕ್ಕೆ, ಸ್ತ್ರೀ ಕುಲಕ್ಕೆ ಕಲಂಕವನ್ನು ತಂದೊಡ್ಡುವುದು ಬೇಡವೆಂದು ಸಂಕಲ್ಪಿಸಿದ್ದೆ. ಆದರೆ ನನ್ನ ಹೃದಯವು ತಲ್ಲಣಿಸುತ್ತಿದೆ. ಸಂಕಲ್ಪವು ಬೆಣ್ಣೆಯಂತೆ ಕರಗುತ್ತಿದೆ. ಹರಿಯುತ್ತಿದೆ. ಅಂತರ್ಯಾಪ ಅಸಹನೀಯ ರಹಸ್ಯವನ್ನು ಇನ್ನೊಬ್ಬರೊಡನೆ ಹೇಳಿಕೊಂಡರೆ, ಅಥವಾ ಕಾಗದ ಮೇಲೆ ರೂಪಿಸಿದರೆ ಹೃದಯವು ಹಗುರವಾಗುತ್ತದೆಯಷ್ಟೆ! ಹೌದು! ಅಂತಹ ಹೃದಯ ನೈರ್ಮಲ್ಯಕ್ಕಾಗಿಯೇ ನಾನೀ ಲೇಖನವನ್ನು ಬರೆದೆ. ಹಸ್ತವು ಕಂಪಿಸುತ್ತಿದೆ. ನಮ್ಮ ಸ್ತ್ರೀಯರು! ನಮ್ಮ ಪುರುಷರು! ನಮ್ಮ ವ್ಯಾಪಾರ! ನಮ್ಮ ಕಾಶಿ! ಕಾಶಿಯಲ್ಲೂ ಅಧರ್ಮವಿದೆಯೇ? ಅಲ್ಲಿಯೂ ದುರ್ಮಾರ್ಗಪ್ರವರ್ತನೆಯೇ! ಹಾಯ್! ಹಾಳಾಯಿತು! ಎಲ್ಲಾ ಹಾಳಾಯಿತು! ಹೊಟ್ಟೆ! ಹೊಟ್ಟೆ!! ಹೊಟ್ಟೆ!!!

ಕಾಶಿಯ ಅಮೋಘವಾದ ದೇವಸ್ಥಾನ! ಕೆರೆ, ನದಿ, ಸರೋವರ. ಸಹಸ್ರ ಗಟ್ಟಲೆ ಭಕ್ತಜನರು ನೆರೆದು, ಬೆರೆತು ಶ್ರೀ ವಿಶ್ವನಾಥನ ದರ್ಶನದಲ್ಲಿ ತಲ್ಲೀನರಾಗಿದ್ದಾರೆ. ಜನ ಮರುಳೇ ಜಾತ್ರೆ ಮರುಳೇ! ಹದಗೆಟ್ಟು ಉತ್ಸವ ಜರಗುತ್ತಿದೆ. ಜನತಂಡಗಳಿಗೆ ಮೈಮೇಲಿನ ಅರಿವಿಲ್ಲ! ದೇಹದ ಹಂಗಿಲ್ಲ! ಕಾಶಿ! ಭಕ್ತಿ! ಶ್ರದ್ಧೆ! ಅಂತಹ ಕಾಶಿಯಲ್ಲಿ ನಾನು ಕಂಡ ದುಷ್ಟತನವು ನಡೆಯಬಾರದಿತ್ತು! ಆಗ ಶ್ರೀ ವಿಶ್ವನಾಥನ ಮಹಿಮೆಯು ಅಪ್ರತಿಮವಾಗುತ್ತಿತ್ತು—ಅಪ್ರತಿಹತವಾಗುತ್ತಿತ್ತು.

ನಾನು ದೇವಸ್ಥಾನವನ್ನು ಕಂಡೆ. ಶ್ರೀ ವಿಶ್ವನಾಥನಿಗೆ ನಮಸ್ಕಾರಗಳನ್ನರ್ಪಿಸಿದೆ; ದಿವ್ಯ ಮೂರ್ತಿ! ಪ್ರಚಂಡವಾಗಿ ನಿಂತಿದ್ದಾನೆ! ಹಾ ಪಾವನ ಮೂರ್ತಿಯೇ! ನಮಸ್ತೇ! ನಮಸ್ತೇ!!

ಸಂಜೆಯಾಯಿತು—ಊಟದ ವ್ಯವಸ್ಥೆಗಾಗಿ ಪೇಟೆಯತ್ತಕಡೆ ನಡೆದೆ.

ಉತ್ತಮ ಊಟದ ಹೊಟೇಲು ಆವುದೆಂದು ಒಬ್ಬ ಪಥಿಕನೊಡನೆ ವಿಚಾರಿಸಿದೆ. ಪುಣ್ಯಾತ್ಮ! ಬಳಿಯಲ್ಲೇ ಇದ್ದ ದೊಡ್ಡ ಹೊಟೇಲೊಂದನ್ನು ತೋರಿಸಿದ. ವಿದ್ಯಾವಂತರ ಪಡೆಯಿರುವುದೇ ಆ ಹೊಟೇಲಲ್ಲೆಂದ—ಸಂತೋಷವಾಯಿತು. ಅವನಿಗೆ ಧನ್ಯವಾದಗಳನ್ನರ್ಪಿಸಿದೆ. ಹೊಟೇಲನ್ನು ನುಗ್ಗಿದೆ.

ಭವ್ಯವಾದ ಮಂದಿರ. ಉಜ್ವಲವಾಗಿ ಬೆಳಗುತ್ತಿದೆ. ಕ್ರಮನಿಯಮಗಳು ಅಧುನಿಕವಾಗಿದ್ದುವು. ಜನಿವಾರ ಧರಿಸಿದ ಚಾರರ ಪಡೆಯು ನಿರಂತರ ಸಿದ್ಧವಾಗಿದ್ದಂತಿತ್ತು. ಮೇಜಿನ ಬಳಿ ಯಜಮಾನನ ಠೀವಿಯನ್ನು ಪ್ರದರ್ಶಿಸುತ್ತಾ, ಹೊಟ್ಟೆಯನ್ನು ಮುಂದಿಕ್ಕಿ ಹಣೆಯಲ್ಲಿ ಮೂರು ನಾಮಗಳನ್ನು ಬಳಿದು ಒಬ್ಬರು ಕುಳಿತಿದ್ದರು. ಕೇಳಿದೆ—ಒಂದೂಟಕ್ಕೇನಾಗುತ್ತದೆಂದು—ಹೇಳಿದರು—ಮೂರಾಣೆಯೆಂದು—ಕೋಟು ಶರ್ಟುಗಳನ್ನು ತೆಗೆದು ಗೋಡೆಯ ಮುಳ್ಳಿನ ಮೇಲೆ ಭದ್ರೀಕರಿಸಿ ತೂಗಾಡಿ ಮುಖ ಪ್ರಕ್ಷಾಳನವನ್ನು ಪೂರೈಸಿ ಯಜಮಾನನೆದುರು ಹೋಗಿ ನಿಂತೆ. "ಶಂಕೂ!" ಎಂದು ಕರೆದರು. ಶಂಕರನು ವಿಧೇಯನಾಗಿಕೊಂಡು ಬಂದ. ಹುಡುಗನು ನನ್ನನ್ನು ನೆಟ್ಟಗೆ ಒಂದು ಪಾಕಶಾಲೆಗೆ ಕರದೊಯ್ದ.

ಊಟವು ಕಾಶಿಗೆ ಹೆಸರನ್ನು ತರುವಂತಿತ್ತು. ಹಸಿದ ಹೊಟ್ಟೆ!—ಬಹಳವಾಗಿ ಉಂಡುಬಿಟ್ಟೆ!

ಭೋಜನ ತೀರಿತು. ಕೈ ಒರಸುತ್ತಾ, ವಿಶ್ರಾಂತಿಗಾಗಿ ಒಂದು ಮೇಜಿನ ಬಳಿಯಲ್ಲಿದ್ದ ಆರಾಮ ಕುರ್ಚಿಯಲ್ಲಿ ಹೇಳದೆ ಕೇಳದೆ ಕುಳಿತೆ. ಮೇಜಿನ ಮೇಲೆ ಒಂದು ವಾರ್ತಾ ಪತ್ರಿಕೆ ಇತ್ತು. ಕೈಯಲ್ಲೆತ್ತಿಕೊಂಡೆ.

ನಾನು ಕುಳಿತಿದ್ದ ಕೊಠಡಿಗೆ ಮುಖಮಾಡಿ ಇನ್ನೊಂದು ದೊಡ್ಡ ಕೊಠಡಿಯಿತ್ತು. ಅದರ ಬಾಗಿಲನ್ನು ಮುಚ್ಚಿದಂತಿತ್ತು. ಆ ಕೊಠಡಿಗೆ ಒಂದು ಸಣ್ಣ ಕಿಟಕಿ. ತುದಿಗಾಲು ಮಾಡಿ ನಿಂತು ಒಳಗಿಣಿಕುತ್ತಿದ್ದರೆ ಒಳಗೇನುಂಟೆಂದು ಕಾಣುವುದು ಸಾಧ್ಯವಿತ್ತು.

ಊಟಕ್ಕೆ ಅನೇಕರು ಬಂದಿದ್ದರು. ಜಾತ್ರೆಯ ದಿನವಲ್ಲವೇ? ಕೆಲವರು ಊಟ ತೀರಿಸಿ ಹೊರಗಿನ ಜಗಲಿಯ ಮೇಲೋ, ಅಂಗಳದ ಬೆಂಚುಗಳ ಮೇಲೊ ಕುಳಿತು, ಏನೇನೊ ಹರಟೆ ಹೊಡೆಯುತ್ತಿದ್ದರು. ಕೆಲವರು ಅಲ್ಲಲ್ಲಿಯ ಸಣ್ಣ ದೊಡ್ಡ ಕೊಠಡಿಗಳಲ್ಲಿ ಮಲಗಿ, ರಾತ್ರೆ ನಡೆಯಲಿದ್ದ ಮಹೋತ್ಸವಕ್ಕೆಂದು ನಿದ್ರೆಯನ್ನು ವನವಾಸಕ್ಕಟ್ಟಲುದ್ಯುಕ್ತರಾಗಿದ್ದರು. ನನಗೂ ನಿದ್ರಿಸುತ್ತಿದ್ದರಾಗುತ್ತಿತ್ತೆಂದು ಆಶೆಯಾಯಿತು. ಆದರೂ ಮನದೊಳಗೆ ಮಿತಿಮೀರಿದ ಬೇಸರ. ಊರನ್ನು ತೊರೆದು ಮಿತ್ರವರ್ಗರಹಿತನಾಗಿ ಏಕೆ ಇತ್ತ ಬಂದೆನೊ ಎಂದು ಚಿಂತೆ! ನನ್ನ ಸಂದರ್ಭಾನುಸಾರದ ವಿರಕ್ತಭಾವನೆಗಾಗಿ ಪಶ್ಚಾತ್ತಾಪ ಪಟ್ಟೆ. ಬಂದ ಹಾಗೆ ಒಮ್ಮೆ ಹಿಂದೆ ಹೋಗುತ್ತಿದ್ದರೆ ಸಾಕೆನಿಸುತಿತ್ತು. ಅಂತಹ ವರ್ಣನಾತೀತ ಬೇಸರ—ಅಮಿತ ಜಾಡ್ಯ. ಪರವೂರಿಗೆ ಒಬ್ಬಂಟಿಗನಾಗಿ ಸಂಚಾರ ಬೆಳಿಸಿದರೆ ಸಾಕಿಲ್ಲ. ಆ ಸಂಚಾರದ ಸವಿಯುಣ್ಣುವಷ್ಟು ಸ್ವಸ್ಥಚಿತ್ತವು ಬೇಕು.

ಅರ್ಧ ಘಂಟೆಯು ಕಳೆಯಿತು. ಕಣ್ಣಾಲಸ್ಯವಾಗುವುದರಲ್ಲಿತ್ತು.—ಅಷ್ಟರಲ್ಲಿ ಯಜಮಾನ ಸ್ವಾಮಿಯವರು ಹೊಟ್ಟೆಯನ್ನು ಸವರುತ್ತ ನನ್ನತ್ತ ಬಂದರು. ಇಂಗ್ಲಿಷಿನಿಂದ "ಹೋ ನಿಮಗೆ ಪುಸ್ತಕ ಬೇಕು?" ಎಂದು ಪ್ರಶ್ನೆಯಿತ್ತರು. ಅದೇ ಭಾಷೆಯಿಂದ "ಹೌದು!" ಎಂದೆ. ಯಜಮಾನನು ನನ್ನಲ್ಲಿಟ್ಟ ದೃಷ್ಟಿಯನ್ನು ಪರಿಶೀಲಿಸಿದೊಡನೆ ಕುರಿಗಳನ್ನು ಕೊಲ್ಲಲು ಸಿದ್ಧಮಾಡುತ್ತಿರುವ ಕಟುಕನ ನೆನಹು ನನಗೆ ಆಗ ಉಂಟಾಯಿತು. ಅನ್ಯರನ್ನು ಬಲಿಕಂಭಕ್ಕರ್ಪಿಸುವುದೇ ಅವನ ಉದ್ಯಮದಂತಿತ್ತು. ನನ್ನನ್ನು ಪುನಃ ಚೆನ್ನಾಗಿ ನೋಡಿದರು. ಏನೋ ಕಲ್ಪಿಸಿಕೊಂಡಂತವನಾದರು. "ವಿಶ್ವನಾಥ!" ಎಂದರು. ಮಧ್ಯವಯಸ್ಕನೊಬ್ಬನು ಓಡಿ ಬಂದ. "ಇಗೋ ಇವರಿಗೆ ಓದಲಿಕ್ಕೆ ಪುಸ್ತಕ ಬೇಕೊ ಕೇಳಿ ಕೊಡು! ಒಳಗೆ ಕರೆದುಕೊಂಡು ಹೋಗು"ಎಂದರು.

ಚಾರ:—"ತಮಗೆ ಓದಲಿಕ್ಕೆ ಪುಸ್ತಕಬೇಕು?" ನನಗೆ ಪುಸ್ತಕದ ಹುಚ್ಚು ಬಹಳ. "ಹೌದು! ಎಲ್ಲುಂಟು ತಾ" ಅಂದೆ.

"ಬನ್ನಿ, ಒಳಗೆ ಬನ್ನಿ" ಎಂದು ನನ್ನ ಮುಂದಿದ್ದ ಕೋಣೆಯ ದಟ್ಟ ಬಾಗಿಲನ್ನು ದೂಡಿ ಮುಂದೆ ಸಾಗಿದ. ಎದ್ದು ನಾನೂ ಹಿಂಬಾಲಿಸಿದೆ.

ಕೋಣೆಯೊಳಗೊಂದು ಕೋಣೆ. ದೂರದಲ್ಲಿ ಇನ್ನೊಂದು ಭವ್ಯವಾದ ಹೋಲ್ ಕಂಡಿತು. ಶುಭ್ರವಾದ ಬೆಳಕಿನಿಂದ ಥಳಥಳಿಸುತ್ತಿದೆ. ಕನ್ನಡಿ, ಚಿತ್ರಪಟಗಳು ಸಾಲು ಸಾಲಾಗಿ ನಿಂತು ಹೋಲಿನ ಪ್ರಕಾಶವನ್ನು ಪುಟಗೊಳಿಸುವಂತಿದ್ದುವು. ಕೆಲವು ದೊಡ್ಡ ಪಟಗಳು ಸ್ತ್ರೀಯರ ಬೆಡಗು ವಯ್ಯಾರದಿಂದ ಮನ್ಮಥ ವಾತಾವರಣವನ್ನು ಬಹಿರಂಗವಾಗಿ ಪ್ರಕಟಿಸುತ್ತಿದ್ದುವು. ಕುರ್ಚಿಗಳು ಕೆಲವು ಕ್ರಮದಲ್ಲಿ ನಿಂತಿದ್ದುವು.

ಸುಗಂಧಮಯ ಮಂದಿರ! ಇತ್ಯಾದಿ ಇತ್ಯಾದಿ........ ದೂರದಲ್ಲೊಂದು ಪುಸ್ತಕ ಭಂಡಾರ. ರಾಶಿ ರಾಶಿ ಪುಸ್ತಕಗಳು! ಹುಡುಗನು ಅದರ ಬಾಗಿಲನ್ನು ತೆರೆದಿಟ್ಟ. ಒಂದು ಆರಾಮ ಕುರ್ಚಿಯನ್ನು ಈಚೆಗೆ ಎಳೆದಿಟ್ಟ. 'ಬರುತ್ತೇನೆ' ಎಂದು ಹೊರಕ್ಕೆ ಹೊರಟ.

ವಿಶಾಲ ಭವನವಲ್ಲವೇ? ನಿಶ್ಶಬ್ದ—ಜನರಾರೂ ಇರುವಂತೆ ಭಾಸವಾಗಲಿಲ್ಲ. ಆರಾಮ ಕುರ್ಚಿಯ ಮೇಲೆ ಕುಳಿತೆ. "ಅರೇಬಿಯನ್ ನೈಟ್ಸ್" ಕಥೆ ಪುಸ್ತಕ ಒಂದು ಕೈಗೆ ಬಂತು. ಕಾಲಹರಣ ಮಾಡುವುದಕ್ಕಾಗಿ ಅದರ ಹಾಳೆಗಳನ್ನು ಮಗುಚುತ್ತಿದ್ದೆ.

ಟಿನ್! ಟಿನ್! ಎಂದು ರಾತ್ರೆಯ ಎಂಟು ಘಂಟೆಯಾಯಿತು. ಹೊಟೇಲಿನ ನವೀನ ರೀತಿಯ ಕ್ರಮ ನಿಯಮಗಳನ್ನು ಕಂಡು ಸುಖಗೊಂಡು, ರಾತ್ರೆಯನ್ನು ಇಲ್ಲೇ ಕಳೆದು ಬೆಳಿಗ್ಗೆ ಎದ್ದು ಊರಿನ ದಾರಿ ಹಿಡಿಯಬಹುದೆಂದು ಭಾವಿಸಿಕೊಂಡೆ. ಆಲಸ್ಯವು ನನ್ನನ್ನು ಕಟ್ಟಿತ್ತು—ಮುತ್ತಿತ್ತು!!

ಒಂದೆರಡು ನಿಮಿಷಗಳು ಕಳೆದುವು ಮಾತ್ರ! ಸೌಂದರ್ಯವತಿಯಾದ ಒಬ್ಬ ಹೆಂಗಸು ಬಳಿಯ ಮಾಳಿಗೆ ಮೆಟ್ಟಲನ್ನಿಳಿದು ಕೆಳಗೆ ನನ್ನ ಬಳಿ ಬಂದು ಒಳಗೆ ಬಾಡುತ್ತಿದ್ದ ಮುಖವನ್ನು ಹೊರಗೆ ಕೃತ್ರಿಮವಾಗಿ ಅರಳಿಸಿ, ಮಂದಹಾಸಪೂರಿತೆಯಾದಳು. ನನಗಾಶ್ಚರ್ಯ! ಸ್ತ್ರೀ ಸಮ್ಮುಖದಲ್ಲಿರುವುದೆಂದರೆ ನನಗೆ ಇಲ್ಲದ ಬೇಸರ! ಅದರಲ್ಲೂ ಪರಸ್ತ್ರೀ! ರೂಪವತಿ! ಯುವತಿ! ಪಾರೆ ಬೈತಲೆ, ತರಂಗ ತರಂಗಗಳಂತಿರುವ ಬಾಚಿದ, ಹೊಳೆಯುವ ಕೇಶ! ಮುಖದ ಮೇಲೆ 'ಪೌಡರಿ'ನ ಲೇಪನದಿಂದೊದಗಿದ ಹೊಳಪು! ಕೃತ್ರಿಮ ಕಾಂತಿ! ರವಕೆಯ ಮೇಲ್ಭಾಗದಿಂದ ಎದೆ, ಬಲ ಎಡ ಪಾರ್ಶ್ವದಿಂದ ರೂಪದ, ಸೌಂದರ್ಯದ, ಬಾಳೆಯ ದಿಂಡಿನಂತಹ ಕೈಗಳು! ಚೆಲುವೆ! ಚೆಲುವೆ! ನಿಜವಾಗಿಯೂ ಸೌಂದರ್ಯಸಂಪನ್ನೆ! ಅವಳ ಪ್ರಥಮಾವಲೋಕನದಿಂದಲೇ ನನ್ನಲ್ಲಿ ಬೆಲೆವೆಣ್ಣುಗಳ ಸ್ಮರಣೆಯಾಯಿತು. ಮೇಜಿನ ಬಳಿ ನಿಂತು, ಸಮೀಪಿಸುವಂತೆ ಮಾಡಿ "ತಾವು ದಯ ಮಾಡಿಸಿದುದು ಸಂತೋಷ" ಎಂದಳು.

ನಾನು ಕಣ್ಬಾಯಿ ಬಿಟ್ಟೆ! ಸಂಬಂಧವಿಲ್ಲದ ನುಡಿಗಳನ್ನು ಕೇಳಿ ಬೆರಗಾದೆ! ಆದರೂ, "ಹೌದು! ಪುಸ್ತಕ!" ಎಂದು ಗಡಿಬಿಡಿಯೊಡನೆ ಉತ್ತರಿಸಿದೆ.

"ತಮ್ಮದು ಯಾವ ಊರಾಯಿತು?"

"ಮೈಸೂರು........."

"ಕಾಶಿ ಯಾತ್ರೆಗೆ ಬಂದುದು?........?

"ಅಲ್ಲ, ಬೆನಾರೆಸ್ ಯುನಿವರ್ಸಿಟಿಯನ್ನು ನೋಡ ಬಂದೆ. ಅಲ್ಲಿಂದ ದೇವಸ್ಥಾನಕ್ಕೆ. ಹೋಗಿ ಇತ್ತ ಬಂದೆ".

"ಬನ್ನಿ ಮೇಲೆ, ಮಾಳಿಗೆಗೆ ಬನ್ನಿ, ಮೇಲೆ ಯಾರಿಲ್ಲ."

ನಾನು ಕಕ್ಕಾಬಿಕ್ಕಿಯಾದೆ. ಅನಿರೀಕ್ಷಿತವಾಗಿ, ಅರ್ಥ ತಿಳಿಯದೆ ಘಟಿಸುತ್ತಿರುವ ಘಟನೆಗಳು ಮನುಷ್ಯನಿಗೆ ಬೆರಗನ್ನುಂಟುಮಾಡುತ್ತವೆ. ಹಾಗೆ ನನಗಾಯಿತು. ಅವಳು ಬಲವಂತ ಪಡಿಸಿದಳು. ಆದರೂ ನಾನು ಸಮ್ಮತಿಸಲಿಲ್ಲ. ಎದ್ದು ಹೊರಡಲಿದ್ದೆ. ಅಸ್ಥಿರಳಾದವಳು ಎಂದಳು "ಬಡವರಲ್ಲಿ ಕರುಣೆದೋರಲು ಅಂಜಿಕೆಯೇ?"

"ಎಂತಹ ಕರುಣೆ!"

"ಪಲ್ಲಂಕವಿದೆ"

"ಇದೇನು ಸೂಳೆಯ ಮನೆಯೇ?"

ಅವಳು ಸುಮ್ಮಗಾದಳು. ಅರೆ ನಿಮಿಷದಲ್ಲಿ "ಸೂಳೆಯರು ಜೀವಿಗಳಲ್ಲವೇ?" ಎಂದಳು. ನನಗೆ ರೋಷವೇರಿತು. "ಥೂ ಸೂಳೆಯರ ಸಹವಾಸ!" ಎಂದು ಗರ್ಜಿಸಿಬಿಟ್ಟೆ! ಅವಳು ಬೆಚ್ಚಿಬಿದ್ದಳು. ಅವಳ ಸೌಂದರ್ಯದ ಸರೋರವವು ಬತ್ತಿ ಒಣಗಿಹೋಯಿತು. ಕೋಪಗೊಂಡಂತೆ ಕಂಡಿತು.

"ಸ್ವಾಮೀ, ಹಾಗೆ ಹೇಳಬೇಡಿ! ಬಡವರಾದ.... "

"ಎಂತಹ ಬಡವರು! ಹೀಗೂ ಬದುಕಬೇಕೆ?"

"ಅಲ್ಲಯ್ಯಾ ಹೊಟ್ಟೆ............"

"ಎಂತಹ ಹೊಟ್ಟೆ!—ನಿಮ್ಮ ಹೊಟ್ಟೆಗೆ ಬೆಂಕಿ! ಮೈಮಾರಿ ಹೊಟ್ಟೆ ತುಂಬಿಸುವುದಕ್ಕಿಂತ ಮಾರುವ್ವ ಹಗ್ಗ.........."

"ಅಲ್ಲ ಸ್ವಾಮೀ, ನೀವು ಹೊಟ್ಟೆ ತುಂಬಿದ ಧನಿಕರು! ನಿಮಗೆ ಇನ್ನೊಬ್ಬರ ಸಾವು ಬಲು ಸೊಗಸಾಗಿ ತೋರಬಹುದು. ಹೊಟ್ಟೆಗಿಲ್ಲದವರಿಗೆ ಹಸಿವು ಎಷ್ಟೆಷ್ಟು ಹೆಚ್ಚಾಯಿತೋ ಅಷ್ಟಷ್ಟು ಹೆಚ್ಚಾಗುತ್ತೆ ಜೀವದ ಮೇಲೆ ಆಸೆ. ನಮ್ಮ ಜೀವದ ಹಂಗು ನಮಗೆ—ಅದರ ಅಭಿಮಾನ ನಮಗೆ-ನಿಮಗಿಲ್ಲ!"

"ಬದುಕುವುದಕ್ಕೆ ಬೇರೆ ಮಾರ್ಗವಿಲ್ಲವೇ?"

"ನಮಗೆ ದೇವರು ತೋರಿಸಿದ ಮಾರ್ಗ ಇದುವೆ ಸ್ವಾಮಿ. ಗಂಡಸರಿಗೆ ನೂರಾರು ಮಾರ್ಗಗಳಿರಬಹುದು........ನನಗೆ - ನಿರ್ಗತಿಕಳಾದ ಹೆಂಗಸಿಗೆ—ನನಗೆ ಎರಡೇ ಎರಡು ಮಾರ್ಗವಯ್ಯಾ, ದೇಹವನ್ನು ನೀಗಿಕೊಳ್ಳಬೇಕು, ಅಥವಾ ಮಾರಿಕೊಳ್ಳಬೇಕು.

"ಇದೆಂತಹ ಮೋಸಗಾರಿಕೆಯ ಮಾರಾಟ! ಊಟಕ್ಕೆ ಬಂದವರಿಗೆ............"

"ಈ ಕಸಬಿನಲ್ಲಿ ಮೋಸವಿಲ್ಲ. ಅಪಾರ ಸುಖವಿದೆ. ಆ ಸುಖವನ್ನು ಮನದಣಿಯೆ ಉಣ್ಣ ಬೇಕು" ಎಂದು ಈ ದಾರಿ ಹಿಡಿಯಲಿಲ್ಲ. ಹಸಿದು ಹಸಿದು ದಾರಿ ತಪ್ಪಿದ ಭಿಕಾರಿಣಿಯಾದ ನನ್ನನ್ನು ವಿಧಿ ಈ ದಾರಿಗೆ ನೂಕಿತು. ಇಲ್ಲಿಗೆ, ಇದರ ಯಜಮಾನರಲ್ಲಿಗೆ ಬಂದೆ!

ನಾನು ಸುಮ್ಮಗಾದೆ. "ದಾರಿದ್ರ್ಯ—ಹೊಟ್ಟೆ!" ಎಂದೊಡನೆ ನನ್ನ ರೋಷದ ಅಗ್ನಿಯು ತಟ್ಟನೆ ಜಾರಿ ಜ್ಞಾನದ ತಂಪು ಹರಡಿತು. ಹೌದೆಂದು ಭಾವಿಸಿಕೊಂಡೆ.

ಅವಳು ಮುಂದರಿಸಿದಳು. "ಸ್ವಾಮೀ, ಇಷ್ಟು ಮಾತು ನಾನು ಯಾರೊಡನೆಯೂ ಮಾತಾಡಿರಲಿಲ್ಲ. ನನಗೆ ತಿಳಿವು ಬರುವುದಕ್ಕೆ ಮೊದಲು ತಬ್ಬಲಿಯಾದೆ. ಮದುವೆಯಾಯಿತು. ಎರಡು ವರ್ಷಗಳಲ್ಲೇ ಅವರ ಮರಣವಾಯಿತು. ಕುಟುಂಬವಿಲ್ಲ. ದಾತರಿಲ್ಲ. ಬ್ರಾಹ್ಮಣತಿ—ಪುನರ್ವಿವಾಹವಿಲ್ಲ. ಕಾಸಿಲ್ಲ. ಗತಿಯಿಲ್ಲ. ನಿಲ್ಲುವುದಕ್ಕೆ ನೆರಳಿಲ್ಲ. ಬೀದಿಯ ಭಿಕಾರಿಣಿಯಾದೆ. ಪ್ರಾಯದ, ರೂಪದ ಭಿಕಾರಿಣಿಗೆ ಮುಂದೆ ಗತಿಯಾವುದು? ಕುಟುಂಬದವರು ದೂರದವರಲ್ಲಿ ದೂಡಿದರು. ಬದುಕು ಹೇಗೆ—ಕೂಲಿಯೇ? ಈ ರೂಪವನ್ನಿಟ್ಟುಕೊಂಡು ಎಲ್ಲಿ ಕೂಲಿಗೆ ಹೋಗಲಿ! ಈ ರೂಪವು ನನ್ನ ಮನಃಶಾಂತಿಯನ್ನು ನಿರ್ಮೂಲಿಸಿತು. ದಿನಗಳೆಯುವುದು ಕಷ್ಟವಾಯಿತು. ಬೀದಿ ನಡೆದರೆ ಪುರುಷರ ದೃಷ್ಟಿಶರಗಳು ಮೇಲ್ಬಿದ್ದು ಹೃದಯವಿಬ್ಬಗೆಯಾಗುತ್ತಿತ್ತು. ದೇವರು ಪ್ರಾಯ ಕೊಟ್ಟ—ರೂಪ ಕೊಟ್ಟ—ಹೊಟ್ಟೆ ಕೊಟ್ಟ—ಹಸಿವು ಕೊಟ್ಟ—ಕಷ್ಟ ಕೊಟ್ಟ. ಆದರೆ ಆತ್ಮಹತ್ಯೆ ಮಾಡಿಕೊಳ್ಳಲು ಕಲ್ಲುಮನಸ್ಸನ್ನು ಕೊಡಲಿಲ್ಲ—ಧೈರ್ಯ ಕೊಡಲಿಲ್ಲ. ಎಲ್ಲೆಲ್ಲೊ ಅಲೆದು ಆರಾರಿಗೋ ಹೇಗೆಗೋ ಸಿಕ್ಕಿ ರಸವಿಲ್ಲದಂತಾದೆ. ಮಾನಾಭಿಮಾನಗಳು ದುಡ್ಡಿದ್ದವರಿಗೆ ಮಾತ್ರ! ಹಸಿವಿನ ಹೊರೆಯನ್ನು ಹೊತ್ತು ಬೀದಿ ಅಲೆದಾಡಿದ ಘೋರ ದಿನಗಳನ್ನು ಸ್ಮರಿಸಿಕೊಂಡರೆ ತಲೆ ಗಿರ್ರನ್ನುತ್ತದೆ. ಕಣ್ಣಲ್ಲಿ ನೀರಲ್ಲ—ರಕ್ತ ಬರುತ್ತದೆ. ನನ್ನ ಜಾತಿ ಹೋಯಿತು. ಕುಲಹೋಯಿತು. ಮಾನ ಹೋಯಿತು. ಯಾರನ್ನು ದೂರಲಿ? ಅದೃಷ್ಟವನ್ನೆ? ಹೌದದು! ಅಲ್ಲ ಅಲ್ಲ! ಹಾಳು ಪುರುಷ ಸಮಾಜವನ್ನು-ಪ್ರಾಯ ಒಂದು ಉಳಿಯಿತು! ಈ ರೂಪ, ಈ ಪ್ರಾಯ ಇರುವ ವರೆಗೂ ಉಳಿಗಾಲವಿಲ್ಲೆಂದು ನನಗೆ ತಿಳಿಯಿತು. ನೀರಿಗೆ ಬಿದ್ದೆ—ಅಲ್ಲ ಪುರುಷರು ನನ್ನನ್ನು ಕ್ರೌರ್ಯದಿಂದ ತಳ್ಳಿದರು. ಇನ್ನು ಚಳಿಯೇನು? ಇಡೀ ಮುಳುಗಿದ ಅನಾಥೆಗೆ ರಾತ್ರೆಯೇನು ಹಗಲೇನು? ಈ ರೂಪ ಈ ಪ್ರಾಯ ಇವುಗಳಿಂದಲೇ ಜೀವಿತವನ್ನು ಸಾಗಿಸಬೇಕೆಂದು ಬಗೆದೆ. ಪಾಪವೋ ಪುಣ್ಯವೋ, ಸೂಳೆಗಾರಿಕೆಯೋ, ಬ್ರಾಹ್ಮಣ್ಯವೋ, ಅದು ನನಗೆ ತಿಳಿಯದು. ನನಗೆ ತಿಳಿದಿರುವುದು ಕೆಟ್ಟ ಹಸಿವು! ನನಗೆ ಸುಖದ ಆಸೆಯಿಲ್ಲ! ಐಶ್ವರ್ಯದ ಪ್ರೇಮವಿಲ್ಲ! ಇರುವುದು ಜೀವದ ಮೇಲಿನ ಆಸೆ—ಅದರ ಮೇಲಿನ ಪ್ರೇಮ. ಬದುಕಬೇಕು—ಹೇಗಾದರೂ ಬದುಕಬೇಕು, ಅಷ್ಟೇ. ನನ್ನಲ್ಲಿರುವುದು ವಿಕ್ರಯಸಿದ್ಧವಾದ ರೂಪ, ಪ್ರಾಯ. ನನಗೆ ಬೇಕಿರುವುದು ಅನ್ನ! ಅನ್ನ! ಅನ್ನ! ಹೊಟ್ಟೆ ತುಂಬಿದವರು ಹೊಟ್ಟೆ ತುಂಬದವರಿಗೆ ಬೋಧನೆಗಳನ್ನು ಕೊಡುವ ಅಧಿಕಾರವಿದೆ. ಆದರೆ ಹೊಟ್ಟೆಗೆ ಅನ್ನ ಕೊಡುವ ಮನಸ್ಸಿಲ್ಲ. ಮರುಫಲವಾಗಿ ಸುಖ ಸಿಗುವುದಾದರೆ ಎಷ್ಟು ವೆಚ್ಚಕ್ಕೂ ಧನಿಕರು ಸಿದ್ಧರು! ಧನಿಕರಿಗೆ ಬಡವರ ಹಸಿವಿನ ಕೂಗು ಏನು ಗೊತ್ತು? ಅವರ ಕಷ್ಟ ಹೇಗೆ ಗೊತ್ತು? ಸ್ವಾಮೀ? ಇಷ್ಟು ಮಾತನ್ನು ಆಡುವವಳಿದ್ದಿಲ್ಲ. ನಾಯಿಯ ಜನ್ಮವಾದರೂ ಮೇಲು! ಬೇಡ! ಏಳೇಳು ಜನ್ಮಕ್ಕೂ ಬೇಡ! ನಿರ್ಗತಿಕ ಜೀವನ—ಗತಿಗಾಣದ ಕಷ್ಟ—ಅಸಹನೀಯ ಬಡತನ."

ಅವಳ ಮಾತು ನಿಂತಿತು. ನಾರದನ ಉಪದೇಶದಿಂದ ಜ್ಞಾನಿಯಾದ ವಾಲ್ಮೀಕಿಯಂತೆ, ಕಣ್ಣಿಲ್ಲದವನಿಗೆ ಕಣ್ಬಂದಂತೆ ನನ್ನ ಅಂತಃಚಕ್ಷುವು ತೆರೆಯಿತು. ಹೃದಯವು ಅವಳ ವಾಗ್ಶರಗಳಿಂದ ಉರಿಯಿತು! ಮುರಿಯಿತು! ಬಿರಿಯಿತು! ಹಾ! ಕ್ರೂರ ಸಮಾಜವೇ! ಹಾ! ಬಡತನವೇ!

ವಾಚಕವೃಂದ! ಮುಂದೇನು! ಧರ್ಮವಾವುದು? ಕರ್ಮವಾವುದು?

ಹಿ.



# ಮದುವೆಯ ದಿನ

ಲೇಖಕರು:— ಶ್ರೀ. ಗೋಪಾಲಕೃಷ್ಣ ಅಡಿಗ, ಮೊಗೇರಿ.



ನಾರಾಯಣನು ಓರ್ವ ಸುಂದರಿಯಾದ ಕನ್ಯಾಮಣಿಯು ಪಾಣಿಗ್ರಹಣಮಾಡಿಕೊಳ್ಳಬೇಕಾಗಿತ್ತು. ಮದುವೆಯು ಅದೆಂದೋ ನಿಶ್ಚಿತವಾಗಿದ್ದು, ಅದರ ಬಗ್ಗೆ ಸರ್ವ ಸಾಹಿತ್ಯಗಳೂ ಸುಸಜ್ಜಿತವಾಗಿದ್ದುವು. ನಾರಾಯಣನ ಭಾವೀ ಸುಖಸಾಧನವೆಂದು ಯಾವುದನ್ನಾತನ ಮಾತಾಪಿತರು ತಿಳಿದಿದ್ದರೋ, ಅದು ಕ್ಷಿಪ್ರದಲ್ಲಿಯೇ ನೆರವೇರಬೇಕಾಗಿತ್ತು. ಆದರೆ ಮದುಮಗನಾದರೋ ಮೊದಲಿನಿಂದಲೂ ನಿವೃತ್ತಿಪರನು. ಲಗ್ನವೆಂಬುದು ಸ್ವೋನ್ನತಿ ಸಾಧನೆಗೆ ದೊಡ್ಡ ಪ್ರತಿಬಂಧವೆಂದಾತನು ತಿಳಿದಿದ್ದು, ಮದುವೆ ಮಾಡಿಕೊಳ್ಳಲು ಇಚ್ಛಿಸುತ್ತಿದ್ದಿಲ್ಲ. ಆದರೆ ತಾಯಿತಂದೆಗಳ ಆಜ್ಞಾನಧೀರಣೆಯನ್ನು ಮಾಡಲಾತನು ಶಕ್ತನಾಗದೆ, ಲಗ್ನವೆಂಬ ದೃಢಶೃಂಖಲೆಯಿಂದ ಬದ್ಧನಾಗಿ ತನ್ನ ಮನೋವಿರೋಧವಾಗಿ, ಆಮುಷ್ಮಿಕ ಸುಖಾಮೃತ ಪಾನಮಾಡುವುದನ್ನು ಬಿಟ್ಟು, ಐಹಿಕ ಸುಖಾನುಭೋಗಿಯಾಗಬೇಕಿತ್ತು.

ಯಾವ ಸುಮುಹೂರ್ತದಲ್ಲಿ ನಾರಾಯಣನ ಲಗ್ನವಾಗಬೇಕಾಗಿತ್ತೋ ಅದು ಸಮೀಪಗತವಾಗಹತ್ತಿತು. ಲಗ್ನ ಮಂಟಪದಲ್ಲಿ ವಧೂ-ವರರು ತಂದು ನಿಲ್ಲಿಸಲ್ಪಟ್ಟರು. ಪುರೋಹಿತರು ಗಟ್ಟಿಯಾಗಿ ಮಂತ್ರ ಹೇಳತೊಡಗಿದರು; ವಾದ್ಯಘೋಷವು ಕೇಳತೊಡಗಿತು. ಲಗ್ನಪ್ರೇಕ್ಷಕರಾಗಿ ಬಂದ ಜನರು ವಧೂವರರನ್ನು ನೋಡತೊಡಗಿದರು. ಇನ್ನೇನು? ಇನ್ನೊಂದು ಕ್ಷಣದಲ್ಲಿ ನಾರಾಯಣನು ವಿವಾಹ ಶೃಂಖಲಾಬದ್ಧ!

ಲಗ್ನನಿಶ್ಚಿತ ಸಮಯವು ಬಂದೇ ಬಿಟ್ಟಿತು. 'ಸುಮುಹೂರ್ತೇ ಸಾವಧಾನ'— ಅಂದರೆ 'ಯಾವಾಗ ಸಮಯವಿದೆಯೋ, ಆಗಲೇ ಜಾಗೃತನಾಗು; ಯೋಗ್ಯ ಕಾಲದಲ್ಲಿ ಜಾಗೃತನಾಗು' ಎಂಬಾಶಯದ ಮಂತ್ರವನ್ನು ಪುರೋಹಿತರು ನುಡಿದರು. ನಾರಾಯಣನು ಮಂತ್ರಾರ್ಥವನ್ನರಿತುಕೊಂಡನು. ತನ್ನ ಮುಂದೆ ಮೂರ್ತೀಭವಿಸಿದ್ದ ಗಂಡಾಂತರದ ಅರಿವಾಯಿತಾತನಿಗೆ! ಆತನು ಜಾಗೃತನಾದನು. ಕೂಡಲೇ ತನ್ನ ಹಸೆಮಣೆಯಿಂದ ಕೆಳಕ್ಕೆ ಜಿಗಿದು ಹುಲಿಯು ಬೆನ್ನಟ್ಟಿದ ಹುಲ್ಲೆಯಂತೆ ಓಡತೊಡಗಿದನು. ಮದುವೆಯ ಮನೆಯಲ್ಲಿ ಹಾಹಾಕಾರವೆದ್ದಿತು. ಅನೇಕರು ನಾರಾಯಣನ್ನು ಹಿಡಿದು ತರಬೇಕೆಂಬಾಶೆಯಿಂದ ಆತನ ಬೆನ್ನ ಹಿಂದೆ ಓಡತೊಡಗಿದರು. ಆದರೆ ಎಲ್ಲಾ ನಿಷ್ಫಲವಾಯಿತು. ಒಬ್ಬನೂ ನಾರಾಯಣನನ್ನು ಹಿಡಿಯಲು ಶಕ್ತನಾಗಲಿಲ್ಲ. ಪುರೋಹಿತರೇ ಮೊದಲಾದ ಬ್ರಾಹ್ಮಣರ ದಕ್ಷಿಣೆ ಸಿಗುವುದೆಂಬ ಆಶೆಯು ಭಸ್ಮವಾಯಿತು. ಭಕ್ಷ್ಯ ಭೋಜ್ಯಗಳನ್ನು ಮೆಲ್ಲಬೇಕೆಂದಿದ್ದವರ ಬಯಕೆಯು ಮರೀಚಿಕೆಯಂತಾಯಿತು. ತಮ್ಮ ಮಗ-ಸೊಸೆಯರನ್ನು ನೋಡಿ ನಲಿಯುತ್ತಾ ತಮ್ಮ ವೃದ್ಧಾಪ್ಯವನ್ನು ಕಳೆಯಬೇಕೆಂದು ನೆನಸಿದ್ದ ವೃದ್ಧ ಮಾತಾಪಿತರ ಒಡಲು ಬೆಂದುಹೋಯಿತು.

ಆದರೆ ನಾರಾಯಣನಿಗೆ ಇದರಲ್ಲೆಲ್ಲಾ ಲಕ್ಷ್ಯವೇನು? ಆ ಪವಿತ್ರ ಮಂತ್ರವು 'ಜಾಗ್ರತನಾಗು!' ಎಂದು ಅವನನ್ನೆಚ್ಚರಿಸಿತು. ನಾರಾಯಣನು ಅದನ್ನರಿತುಕೊಂಡನು. ಆತನಿಗೆ ಸ್ವಸ್ವರೂಪ ಜ್ಞಾನವಾಯಿತು. ನಮ್ಮ ಈ ನಾರಾಯಣನು ಎಲ್ಲಿ ಸಾಂಸಾರಿಕ ಕ್ಲೇಶ ತಾಪತ್ರಯಗಳಿಲ್ಲವೋ, ಎಲ್ಲಿ ಮುಕ್ತಿ ಸಾಧನಮಾರ್ಗವು ಸುಗಮವೋ, ಎಲ್ಲಿ ದೇಶೋದ್ಧಾರ ಕಾರ್ಯಕ್ಕೆ ಆರಿಂದಲೂ ಆತಂಕವಿಲ್ಲವೋ ಅಂತಹ ಸ್ಥಾನವನ್ನು ಕುರಿತು, ಓಡಿಹೋದನು.

ಯಾವಾಗ ನಾರಾಯಣನ ಮಾತೃಭೂಮಿಯು ದಾಸ್ಯಪಂಕದಲ್ಲಿ ಇನ್ನೂ ಇನ್ನೂ ಉಳಿಯುತ್ತಿತ್ತೊ, ಯಾವಾಗ ಆತನ ಪವಿತ್ರ ಧರ್ಮವು ಪರದೇಶದ ಪರಧರ್ಮೀಯರಿಂದ ಖಿಲವಾಗುತ್ತಿತ್ತೋ, ಅಂತಹ ದುರ್ಧರ ಪ್ರಸಂಗದಲ್ಲಿ ನಾರಾಯಣನು ಕೇವಲ ಸ್ವಾರ್ಥಿಯಾಗಿ ತನ್ನ ರಮಣಿಯೊಡನೆ ಸುಖಿಸಲಾರದಾದನು. ಆತನು ತನ್ನ ಕರ್ತವ್ಯಕರ್ಮಕ್ಕೆ ಸಿದ್ಧನಾಗುವುದಕ್ಕಾಗಿ ತೆರಳಿ, ಅತ್ಯದ್ಭುತವಾದ ಯೋಗಸಾಧನ ಮತ್ತು ತಪಃಸಾಧನಗಳಿಂದ ಮಾತೃದೇಶ ಸೇವಾನಿರತನಾದನು. ಮತ್ತು ಆತನು ತನ್ನ ಪವಿತ್ರ ಧರ್ಮವನ್ನೂ, ಭಾರತ ಮಾತೆಯನ್ನೂ ಉದ್ಧರಿಸುವುದಕ್ಕಾಗಿ ಕಾರ್ಯರಂಗಕ್ಕಿಳಿದನು.

ಅಜ್ಞಾನಾಂಧಕಾರದಲ್ಲಿ ಮುಳುಗಿದ್ದ ಮಹಾರಾಷ್ಟ್ರದವರನ್ನು ತನ್ನ ಬೋಧಾಮೃತ ಸಿಂಚನದಿಂದೆಚ್ಚರಿಸಿ, ಅವರಲ್ಲಿ ದೇಶಾಭಿಮಾನ ಧರ್ಮಾಭಿಮಾನಗಳನ್ನುಂಟು ಮಾಡಿದನು. ಜನರೆಲ್ಲರೂ ಆಗ ನಮ್ಮಿ ನಾರಾಯಣನನ್ನು 'ಸಮರ್ಥ ರಾಮದಾಸ'ರೆಂದು ಕರೆಯತೊಡಗಿದರು. ಇವರ ಬೋಧನೆ, ಉತ್ತೇಜನಗಳಿಂದಲೇ ಸಾಹಸ, ಧೈರ್ಯ, ಮತ್ತು ದೇಶಭಕ್ತಿಯನ್ನು ಹೊಂದಿದ ಶಿವಾಜಿ ಮಹಾರಾಜನಿಂದ ಮುಂದೆ ವಿಶಾಲವಾದ ಹಿಂದೂಸಾಮ್ರಾಜ್ಯವು ಸ್ಥಾಪಿತವಾಯಿತು. ಮಹಾರಾಷ್ಟ್ರರ ಆ ದೇಶಾಭಿಮಾನ, ಸ್ವಾಭಿಮಾನಗಳಿಗೆ ಶ್ರೀ ಸಮರ್ಥ ರಾಮದಾಸ ಸ್ವಾಮಿಗಳೇ ಕಾರಣಕರ್ತರು. ಅಂದು ಮದುವೆಯ ದಿನ ಕೆಲವು ಜನರು ದಕ್ಷಿಣೆಯನ್ನೋ ಭೋಜನವನ್ನೋ ಕಳಕೊಂಡರು—ರಾಮದಾಸರ ದೆಸೆಯಿಂದ! ಆದರೆ ಭಾರತ ಮಾತೆಯು ತನ್ನ ಸ್ವಾತಂತ್ರ್ಯವನ್ನು ಪುನಃ ಸಂಪಾದಿಸಿಕೊಂಡಳು.

# "ವಿಷಮ ವಿವಾಹ"

ಕತೆಗಾರ:-ಶ್ರೀ. ಬಿ. ನಾರಾಯಣ ನ್ಯಾಕ್, ಮಂಗಳೂರು.



ರಾತ್ರಿ ಹನ್ನೊಂದು ಘಂಟೆ ಸಮಯವಾಗಿರಬಹುದು ಕಗ್ಗತ್ತಲೆ. ಜಡಿಮಳೆಗೆ ಪ್ರಾರಂಭವಾಗಿತ್ತು. ಶ್ರೀನಗರದ ಮಾರ್ಕೆಟಿನ ಸಮಿಾಪ ಒಂದು ಓಣಿಯಲ್ಲಿ ಇಬ್ಬರು ತರುಣರು ಕೊಡೆಯಿಲ್ಲದೆ ಒದ್ದೆಯಾಗಿ ಬಹು ಕಷ್ಟದಿಂದ ಮುಂದೊತ್ತುತ್ತಿದ್ದರು.

ಓಣಿಯ ಮಧ್ಯೆ ಬರುತ್ತಲೇ ಅವರಲ್ಲೊಬ್ಬನು ಎದುರುಗಡೆ ನೆಲದಲ್ಲಿ ಏನೋ ಕಪ್ಪಿನ ವಸ್ತ್ರವನ್ನು ಕಂಡು ಬೆಚ್ಚಿ ಬೆರಗಾಗಿ ತಟ್ಟನೆ ನಿಂತುಬಿಟ್ಟನು. ಮುಂದಡಿಯಿಡುತ್ತಿದ್ದ ಅವನು ಹಿಂದಕ್ಕಿಟ್ಟನು. ಇದನ್ನು ಕಂಡು ಅವನ ಸಂಗಾತಿಯೂ ಆಶ್ಚರ್ಯಗೊಂಡನು. ‹ಗೋಕುಲ! ಏನು? ಗಾಬರಿಯೇಕೆ!"

"ಅಗೋ! ಎದುರಲ್ಲಿ ಬಿದ್ದುಕೊಂಡಿರುವುದೇನು?"

ರಮೇಶನು ಚಿತ್ತವಿಟ್ಟು ನೋಡಿದನು. ಏನೋ ಕಪ್ಪಗಿನ ದೊಡ್ಡ ವಸ್ತುವೊಂದು ಕರಡಿಯಂತೆ ಬಿದ್ದುಕೊಂಡಿದ್ದುದು ಗೋಚರಿಸಿತು. ಇಬ್ಬರೂ ಅವಾಕ್ಕಾದರು. ಅದನ್ನು ಮತ್ತೂ ದೂರದಿಂದಲೇ ದೃಷ್ಟಿಯಿಟ್ಟು ನೋಡಿದರು. ಅದು ಕದಲಲಿಲ್ಲ. ಗೋಕುಲನು ತನ್ನ ಒಳಜೇಬಿನಿಂದ ಬೆಂಕಿಪೆಟ್ಟಿಗೆಯನ್ನು ತೆಗೆದನು. ಇಲ್ಲ! ಅದು ಉರಿಯಲಿಲ್ಲ. ಮತ್ತೂ ಕಡ್ಡಿ ಸವರಿದ—ಉರಿಯಲೇ ಇಲ್ಲ. ಅಷ್ಟರಲ್ಲಿ ತಮ್ಮ ಹಿಂದಿನಿಂದ ಒಂದು ಕೈದೀಪ (ಲಾಟೀನು) ವನ್ನು ತನ್ನ ಕೊಡೆಯಡಿಯಲ್ಲಿ ಹಿಡಿದುಕೊಂಡು ಯಾರೋ ತಮ್ಮ ಕಡೆಗೆ ಬರುತ್ತಿದ್ದಂತೆ ಅವರಿಗೆ ಕಂಡಿತು. ಸ್ವಲ್ಪ ತಡೆದರು. ದೀಪ ಹಿಡಿದವನು ಮುದುಕನಾಗಿದ್ದನು. ಅದನ್ನೆತ್ತಿ ಹಿಡಿದು ನೋಡಿದರು. ಯಾರೋ ಬಾಲಿಕೆಯೊಬ್ಬಳು ಬಿದ್ದುಕೊಂಡಿದ್ದಂತೆ ಕಂಡಿತು. ದೀಪವನ್ನು ಮತ್ತೂ ಚೆನ್ನಾಗಿ ಬೆಳಗಿಸಿ ಪರಿಶೀಲಿಸಿದರು. ಹೌದು! ಹತ್ತು ಹನ್ನೆರಡು ವರ್ಷ ಪ್ರಾಯದ ಬಾಲಿಕೆ—ಸುಂದರಿ!

ಮುದುಕನು ಅತ್ಯಂತ ಕನಿಕರಗೊಂಡು ಅವಳನ್ನೆತ್ತಿದನು. ಪಾಪ! ಹುಡುಗಿಯು ಶೀತದಿಂದ ಮರದ ತುಂಡಿನಂತಾಗಿದ್ದಳು.

ಇದು ಕಳೆದು ಎರಡು ವರ್ಷಗಳು ಕಾಲನ ಲೀಲೆಯಿಂದ ತೇಲಿ ಹೋದುವು. ಹರಿಹರಪುರದಲ್ಲಿನ ಮುದಿ ಜೋತಿಷ್ಯರಾದ ರಘುನಾಥ ರಾಯರ ಮನೆಯಲ್ಲಿ ಉಷೆಯು ಮದುವೆಗೆ ಬೆಳೆದಿದ್ದಳು. ಆದೊಂದು ದಿನದಲ್ಲಿ ತನ್ನನ್ನು ತೊರೆದು ಎತ್ತಲೋ ನಡೆದ ತಾಯಿಯ ಹೃದಯದ ಕಾಠಿಣ್ಯವನ್ನೂ, ಆದೊಂದು ದಿನದಲ್ಲಿ ಅನ್ನಾಹಾರವಿಲ್ಲದೆ ತಾನು ಓಣಿಯಲ್ಲಿ ಬಿದ್ದು ಮಳೆಯಲ್ಲಿ ನೆನೆದು ಅನುಭವಿಸಿದ ದುಃಖಯಾತನೆಯನ್ನೂ, ತನ್ನನ್ನೆತ್ತಿ, ವಿಚಾರ ಮಾಡಿ, ಮನೆಗೆ ಕರತಂದು ತನ್ನನ್ನು ಪೋಷಿಸಿ ಸಲಹುವ ಪುತ್ರವಿಹೀನರಾದ ರಘುನಾಥರಾಯರ ಕರುಣೆಯನ್ನೂ ನೆನೆನೆನೆದು ಅವಳು ದುಃಖ ಮತ್ತು ಆನಂದಗಳಿಂದ ಸಮ್ಮಿಶ್ರಿತಳಾಗಿ ಕಣ್ಣೀರು ಸುರಿಸುತ್ತಿದ್ದಳು.

ಶ್ರೀನಗರದಲ್ಲಿ ಗೋಕುಲನಿಗೆ ವಿವಾಹ. ಎಲ್ಲೆಲ್ಲಿಯೂ ಗದ್ದಲ. ಕಾಂತಿಮಯಿಯಾದ ಉಷೆಯು ವಿದ್ಯಾವಂತನಾದ ಗೋಕುಲನ ಕೈಹಿಡಿದಿದ್ದಾಳೆ. ಗೋಕುಲನು ತನ್ನ ಜೀವದ ಇದೊಂದು ಹಂಬಲದಲ್ಲಿ ವಿಜಯಿಯಾದುದಕ್ಕಾಗಿ ಒಳಗೊಳಗೆ ಸಂತೋಷಿಸುತ್ತಿದ್ದಾನೆ. ಉಷೆಯು ತನ್ನ ಸ್ವಂತ ಮಗಳೆಂದು ಗೋಕುಲನ ತಂದೆಯಾದ ವಾಮನರಾಯನನ್ನು ನಂಬಿಸಿ, ತಾನು ವಿವಾಹ ನಡೆಸಿದುದನ್ನು ನೆನೆನೆನೆದು ರಘುನಾಥನು ಮಂದಹಾಸಪೂರಿತನಾಗಿದ್ದಾನೆ. ಮದುವೆಯು ಕೊನೆಗೊಂಡಿತು.

ಉಷೆಯು ಯಾರ ಮಗಳೆಂಬ ವಿಷಯವು ಯಾರಿಗೂ ತಿಳಿದಿದ್ದಿಲ್ಲ. ಆದರೂ ಅವಳ ರೂಪದಿಂದ ಮೋಹಿತನಾದ ಗೋಕುಲನು ತಂದೆಯ ಇಚ್ಛೆಗೆ ವಿರುದ್ಧವಾಗಿ ಅವಳು ರಘುನಾಥರಾಯನ ಮಗಳೆಂದೇ ಹೇಳಿ ಅವಳನ್ನು ವಿವಾಹವಾದನು. ಆದರೂ ವಾಮನರಾಯನು ಅದನ್ನು ಸಂಪೂರ್ಣ ನಂಬಲಾರದಾದನು.

ಒಂದು ದಿನ ಸಂಜೆ ವಾಮನರಾಯನು ಸೊಸೆಯನ್ನು ತನ್ನ ಬಳಿಗೆ ಕರೆದನು. ಏನೋ ಕೆಲಸದಲ್ಲಿ ನಿಮಗ್ನಳಾಗಿದ್ದ ಉಷೆಯು ಮಾವನ ಕರೆಯನ್ನು ಕೇಳಿದೊಡನೆ ‹ಓ' ಎಂದು ಹೊರಬಂದಳು.

ವಾಮನ:—ಮಗೂ, ನಿನ್ನ ತಾಯಿಯೆಲ್ಲಿರುವಳು? ನಿನ್ನ ಮಾತಾಪಿತೃಗಳ ಕುರಿತು ನನ್ನಲ್ಲಿ ಸಂಶಯವು ತಲೆದೋರಿದೆ. ಜನರು ಏನನ್ನೋ ಆಡಿಕೊಳ್ಳುತ್ತಿರುವರು!

ಉಷೆಯು ಹೌಹಾರಿಯಾದಳು. ಮಾವನ ವಿಲಕ್ಷಣ ಪ್ರಶ್ನೆಯನ್ನು ಕೇಳಿ ಕಿವಿ ವರೆಗೆ ಕೆಂಪಾದಳು—ಸುಮ್ಮನಿದ್ದಳು.

"ನೀನು ನಿಜವಾಗಿಯೂ ರಘುನಾಥರಾಯರ ಮಗಳೇ?"

"ಅಲ್ಲ"

"ಮತ್ತು! ನಿನ್ನ ತಾಯಿ ಯಾರು?" ವಾಮನರಾಯರಿಗೆ ತಣ್ಣೀರು ಹೊಯ್ದಂತಾಯಿತು.

"ನನ್ನ ತಾಯಿ ಶ್ರೀನಗರದ ಶಾಂತಕುಮಾರಿ. ಅವಳು ಪಾಪಿಷ್ಠೆಯಾದ ನನ್ನನ್ನು ಈ ನಿರಂತರ ದುಃಖಮಯವಾದ ಮರ್ತ್ಯಲೋಕದಲ್ಲಿ ಬಿಟ್ಟು, ತಾನು ಎತ್ತಲೋ ಹೋದಳು. ರಘುನಾಥರಾಯರು ನನ್ನ ಸಾಕುತಂದೆಯವರು". ಆಗ ಅವಳ ವಿಶಾಲವಾದ ಕಣ್ಣುಗಳಿಂದ ಎರಡು ಹನಿ ಕಣ್ಣೀರು ಹೊರಟಿತು. ವಾಮನರಾಯರು ಅಪ್ರತಿಭರಾದರು.

"ನಿನ್ನ ತಾಯಿ ಶಾಂತಕುಮಾರಿಯೇ! ಆಕೆ ಹೇಗಿದ್ದಳು?"

ಉಷೆಯು ಏನನ್ನೋ ಜ್ಞಾಪಿಸಿಕೊಂಡು ತನ್ನ ಕೊರಳಲ್ಲಿದ್ದ ಹಾರದಲ್ಲಿ ನೇತಾಡುತ್ತಿದ್ದ ಚಿಕ್ಕ ಚಿನ್ನದ ಪೆಟ್ಟಿಗೆಯನ್ನು ತೆಗೆದು ‹ನನ್ನ ಮಾತೆಯ ಚಿತ್ರವು ಇದರಲ್ಲಿರುವುದು.! ನಿಮಗವಳ ಪರಿಚಯವುಂಟೇ?" ಎಂದಳು.

ಆ ಚಿಕ್ಕ ಪೆಟ್ಟಿಗೆಯಲ್ಲಿ ಒಂದು ಚಿಕ್ಕ ಭಾವಚಿತ್ರವಿದ್ದಿತು. ಅದರಲ್ಲಿ ರಾಹುಗ್ರಸ್ತ ಚಂದ್ರನಂತಿರುವ ಮುಖವುಳ್ಳ ಸುಂದರಿಯೊಬ್ಬಳ ಚಿತ್ರವಿದ್ದಿತು. ನೋಡುವಾಗ, ತಾಪಗ್ರಸ್ಥದೇವಿಯಂತಿದ್ದಳು. ಮುಖವು ಮಾಲಿನ್ಯವನ್ನು ಹೊಂದಿದ್ದರೂ ನಯನಗಳಲ್ಲಿ ಅಪೂರ್ವ ಕಾಂತಿಯು ನೆಲೆಸಿದ್ದಿತು. ಕೇಶಧಾಮವು ಅಸ್ತವ್ಯಸ್ತವಾಗಿದ್ದುವು—ನೋಡುತ್ತ ನೋಡುತ್ತ ವಾಮನರಾಯನಿಗೆ ಸ್ವಪ್ನದಂತೆ, ಹಿಂದಿನ—ಬಹು ಹಿಂದಿನ ಸಂಗತಿಯೊಂದು ಜ್ಞಾಪಕವಾಯಿತು.

× × × × × ×

ಶಾಂತಕುಮಾರಿಯು ಬಾಲವಿಧವೆ. ಸದಾ ದುಃಖಿನಿ. ಈ ಮಾನವ ಪ್ರಪಂಚದಲ್ಲಿ ಅವಳನ್ನು ಆದರಿಸುವವರಿಲ್ಲ. ಆಕೆಯು, ಆ ಪರ್ಣಕುಟೀರದಲ್ಲಿ ತಾನೊಬ್ಬಳೇ ಕುಳಿತು ತನ್ನ ಅದೃಷ್ಟವನ್ನು ಅಳಿಯುತ್ತಿರುವಳು. ನೋಡುವಾಗ ದಿವ್ಯ ಸುಂದರಿ. ನವ ಯುವತಿ! ಆದರೆ ಅವಳಿಗೆ ಸಂಸಾರಸುಖವನ್ನು ಅನುಭವಿಸಲು ಭಾಗ್ಯವಿರಲಿಲ್ಲ. ರೂಪಸಿಯಾದಾಕೆಯ ವದನವು ಅಮಂಗಳಕಾರಕವೆಂದು ಪಾಪೀ ಸಮಾಜವು ನಿಶ್ಚೈಸಿದ್ದಿತು. ತನ್ನ ವಯಸ್ಸಿನಲ್ಲಿರುವವರೆಲ್ಲ ವಿಧವಿಧದ ಆನಂದಸಮಾರಂಭಗಳಲ್ಲಿ ಮೆರೆಯುತ್ತಿರಲು, ಪಾಪ, ಈಕೆಯು ಮನೆಯ ಮೂಲೆಯಲ್ಲಿ ಕುಳ್ಳಿರಬೇಕು. ಮಂಗಳ ಕಾರ್ಯಗಳಲ್ಲಿ ವಿಧವೆಯು ತಲೆಹಾಕಕೂಡದು. ಅಬಲೆಯಾದಾ ಶಾಂತೆಯು ಈ ಮನೋವೇಧಕ ಪ್ರಸಂಗಗಳನ್ನು ಹೇಗೆ ತಡೆದಾಳು? ಪರಮ ಕರುಣಾಕರನಾದ ಭಗವಂತನಿಗೂ ಆಕೆಯ ಮೇಲೆ ಕರುಣೆಯುಂಟಾಗಲಿಲ್ಲ!

ವಾಮನರಾಯನು ವಿಲಾಸೀ ತರುಣನು! ಪ್ರಪಂಚದ ಸುಖದುಃಖಗಳನ್ನು ಇನ್ನೂ ಅರಿಯದವನು. ಧನಮದದಿಂದಲೂ ಪ್ರಾಯದಿಂದಲೂ ಬಹಳ ಕೊಬ್ಬಿದವನು! ಯಾರ ಭಯವೂ ಅವನಿಗಿರಲಿಲ್ಲ. ಪಾಪಕೂಪದಲ್ಲಿದ್ದ ಅವನ ಮನಸ್ಸು ಶಾಂತೆಯ ಮೇಲೆ ಹೋಯಿತು. ಶಾಂತೆಯು ಅನಾಥೆಯೆಂಬುದು ಅವನಿಗೆ ಗೊತ್ತು. ಅದಲ್ಲದೆ ಅವಳ ಅತುಲ ರೂಪಕ್ಕೆ ಮರುಳಾಗಿದ್ದನು. ಆದರೆ ಶಾಂತೆಯು ಸುಲಭವಾಗಿ ಇವನಿಗೆ ವಶವಾಗುವಂತಿಲ್ಲ. ವಾಮನರಾಯನು ಪ್ರಥಮದಲ್ಲಿ ಧನದ ಆಶೆ ತೋರಿಸಿದನು. ಆದರೆ ಧನವು ಕ್ಷಣಿಕವೆಂದು ಅವಳು ನಂಬಿದ್ದಳು. ತನ್ನ ಹಣಕ್ಕೆ ಅವಳು ಬಗ್ಗುವುದಿಲ್ಲವೆಂದು ತಿಳಿದು, ಕೊನೆಗೆ ಅವಳನ್ನೇ ವಿವಾಹವಾಗುವುದಾಗಿ ಹೇಳಿದನು. ಅದಕ್ಕೂ ಅವಳು ಪ್ರಥಮದಲ್ಲಿ ಒಪ್ಪಲಿಲ್ಲ. ಕೊನೆಗೆ ಬೆದರಿಸಿದನು. ಶಾಂತೆಗೆ ಗಾಬರಿಯಾಯಿತು. ಇರುವುದು ತಾನೊಬ್ಬಳೇ! ಅದಲ್ಲದೆ ಯಾರೂ ಅವಳಿಗೆ ಸಹಾಯದಾತರಿಲ್ಲ.

ಕೆಲವು ತಿಂಗಳುಗಳು ಸಂದುಹೋದುವು! ತನ್ನ ಪ್ರಯತ್ನಗಳೆಲ್ಲಾ ಜಲಹೋಮ ವಾದುದನ್ನು ಕಂಡು ಉದ್ವಿಗ್ನಗೊಂಡು, ಒಂದು ದಿನ ರಾತ್ರಿ ತನ್ನ ಇಬ್ಬರು ಸೇವಕ ರೊಡನೆ ವಾಮನನು ಅವಳ ಹರಕು ಗುಡಿಸಲಿನ ಕಡೆಗೆ ನಡೆದನು. ಬಾಗಿಲನ್ನು ಒಡೆದು ಒಳಗೆನುಗ್ಗಿದನು. ಶಾಂತೆಯು ನಿರುಪಾಯಳಾಗಿ ವಾಮನರಾಯನ ಕೈಯಲ್ಲಿ ಸಿಕ್ಕಿಬಿದ್ದಳು. ಮರು ದಿವಸ ಶಾಂತೆಯೂ ವಾಮನರಾಯನೂ ಆ ಊರಿನಿಂದ ಪರಾರಿಯಾದರು!

ಕೆಲವು ವರುಷಗಳ ನಂತರ ಬೇರೊಂದು ಊರಿನಲ್ಲಿ ಶಾಂತಾವಾಮನರಾಯರು ಇದ್ದಾರೆಂದು ತಿಳಿದುಬಂತು. ವಾಮನರಾಯನು ತನ್ನ ದುಡುಕಿನ ಕಾರ್ಯಕ್ಕೆ ಪಶ್ಚಾತ್ತಾಪಪಟ್ಟನು. ಅವನ ಪಾಪಕಾರ್ಯಕ್ಕೆ ಫಲರೂಪವಾಗಿ ಶಾಂತೆಯು ಗರ್ಭವತಿಯಾದಳು.........ಅಲ್ಲೇ ಒಂದು ಗುಡಿಸಲಿನಲ್ಲಿ ಉಷೆಯ ಜನನವಾಯಿತು. ಈಗಲೀಗ ವಾಮನಿಗೆ ಶಾಂತೆಯ ಮುಖಾವಲೋಕನವೂ ಅಸಹ್ಯವೆನಿಸಿತು! ಈಗಾತನು ಇನ್ನೊಂದು ಮಹಾ ಪಾಪಕೃತ್ಯವನ್ನು ಮಾಡಲು ಬಯಸಿದನು. ಒಂದು ದಿನ ವಾಮನ ರಾಯನು, ತನ್ನನ್ನೇ ನಂಬಿದ್ದ, ತನಿಂದಲೇ ಕೆಟ್ಟಿದ್ದ ಅಭಾಗಿನಿಯಾದ ಶಾಂತೆಯನ್ನೂ ಆ ಹಸುಗೂಸನ್ನೂ ಬಿಟ್ಟು, ತನ್ನೂರಿಗೆ ಹೇಳದೆ ಕೇಳದೆ, ಓಡಿಹೋಗುವ ಆಲೋಚನೆ ಯನ್ನು ಮಾಡಿದನು. ಇವನ ಈ ಕಪಟ ಆಲೋಚನೆಯು ಶಾಂತೆಗೆ ಗೊತ್ತಾಗಲಿಲ್ಲ. ವಾಮನರಾಯನು ಆಲೋಚನೆ ಮಾಡಿದಂತೆ, ಒಂದು ದಿನ ಶಾಂತೆಯನ್ನು ಬಿಟ್ಟು, ಎಲ್ಲಿಗೋ ಹೋಗಿಬಿಟ್ಟನು. ಶಾಂತೆಗೆ ವಾಮನರಾಯನು ತನ್ನನ್ನು ವಂಚಿಸಿದನೆಂದು ಪ್ರಥಮತಃ ತಿಳಿಯಲಿಲ್ಲ—ಕೊನೆಗೆ ತಿಳಿಯಿತು. ಆದರೆ, ಪಾಪ! ಅವಳೇನು ಮಾಡಿ ಯಾಳು? ಅಳುವುದಕ್ಕಲ್ಲದೆ ಅವಳಿಗೆ ಬೇರೇನೂ ಗೊತ್ತಾಗಲಿಲ್ಲ. ಹಾಯ್! ಶಾಂತಾ, ನಿನ್ನ ಗತಿಯು ಹೀಗಾಯಿತೇ

ಶಾಂತಾಕುಮಾರಿಯು ಮತ್ತೇನಾದಳೆಂದು ವಾಮನರಾಯನಿಗಾಗಲೀ, ಊರವರಿ ಗಾಗಲೀ ಗೊತ್ತಾಗಲಿಲ್ಲ. ಅವಳೆಲ್ಲಿಯೋ ವಿಶಾಲವಾದೀ ಜಗತ್ತಿನಲ್ಲಿ ಅದೃಶ್ಯಳಾ ಗಿದ್ದಳು! ಅವಳ ಅವಸ್ಥೆಯು ಮುಂದೇನಾಯಿತೆಂದು ಯಾರಿಗೂ ಗೊತ್ತಾಗಲಿಲ್ಲ. ಇದಾದ ನಂತರ ಅನೇಕ ವರುಷಗಳು ಕಳೆದುವು! ಕೊನೆಗೆ ಶಾಂತೆಯ ಹೆಸರೇ ಜನ ರಿಗೆ ಮರೆತುಹೋಯಿತು. ಸ್ವತಃ ವಾಮನರಾಯನಿಗೆ ತನ್ನ ಚಿಕ್ಕಂದಿನ ಅವಿಚಾರವೂ ಮರೆತು ಹೋಯಿತು.

× × × × × ×

ವಾಮನರಾಯನು ಗಾಬರಿಯಿಂದೊಮ್ಮೆ ಉನ್ಮತ್ತನಂತೆ ಅರಚಿ "ಹಾಗಾದರೆ ನೀನು ನನ್ನ ಮಗಳೇ? ಹಾಯ್! ಎಂತಹ ಪ್ರಮಾದವಾಯಿತು! ಅಣ್ಣತಂಗಿಯರಿಗೆ ವಿವಾಹವೇ? ಹಾ ಗೋಕುಲದಾಸ! ನಿನ್ನ ಭಾವೀ ಸುಖವು ನೀರು ಪಾಲಾಯಿತಲ್ಲಾ" ಎಂದಂದು ಹುಚ್ಚನಂತೆ ಹೊರಗೆ ನಡೆದನು! ಉಷಾ ಕುಮಾರಿಯು ದೇಹದ ಪರಿವೆ ಇಲ್ಲದೆ ಪ್ರಸ್ತರ ನಿರ್ಮಿತ ಪ್ರತಿಮೆಯೋಪಾದಿಯಲ್ಲಿ ನಿಂತಿದ್ದಳು. ಅವಳಿಗೆ ವಾಮನ ರಾಯನ ಯಾವ ಮಾತೂ ಅರ್ಥವಾಗಲಿಲ್ಲ.

× × × × × ×

ಮರುದಿವಸ ಬೆಳಿಗ್ಗೆ ವಾಮನರಾಯನು ಮನೆಯಲ್ಲಿರಲಿಲ್ಲ; ಎಲ್ಲಿಯೋ ಅದೃಶ್ಯನಾಗಿದ್ದನು. ಗೋಕುಲದಾಸನು ಗಾಬರಿಯಿಂದ, ತಂದೆಯನ್ನು ಬಾರೀ ಹುಡುಕಿದನು. ಆದರೆ ವ್ಯರ್ಥವಾಯಿತು. ವಾಮನರಾಯನು ಸಿಕ್ಕಲೇ ಇಲ್ಲ. ಊರೆಲ್ಲಾ ಗದ್ದಲ. ವಾಮನರಾಯನು ಆವುದರ ಸಲುವಾಗಿ ಗೃಹತ್ಯಾಗ ಮಾಡಿದನೋ, ಅದಾರಿಗೂ ಗೊತ್ತಾಗಲಿಲ್ಲ.

ಗೋಕುಲದಾಸನು ಪಿತನ ಶಯನಗ್ರುಹದಲ್ಲಿ ಏನನ್ನೋ ಹುಡುಕಲಾಗಿ, ಒಂದು ಪತ್ರವು ಕಂಡುಬಂತು. ಅದರಲ್ಲಿ ವಾಮನರಾಯನು ತನ್ನ ಬಾಲ್ಯದ ಪಾಪಪೂರಿತ ಚರಿತ್ರೆಯನ್ನು ಸವಿಸ್ತಾರವಾಗಿ ವಿವರಿಸಿ ಬರೆದಿದ್ದನು ಪತ್ರದ ಕೊನೆಯಲ್ಲಿ ದೊಡ್ಡ ಅಕ್ಷರಗಳಿಂದ ಹೀಗೆ ಬರೆದಿತ್ತು: "ಉಷೆಯು ನಿನ್ನ ತಂಗಿಯು! ನಿನ್ನಪತ್ನಿಯಲ್ಲ!" ಗೋಕುಲನು ಇದನ್ನು ಅನೇಕಾವೃತ್ತಿ ಓದಿದನು. ಅವನ ಕಣ್ಣುಗಳು ಅಶ್ರುಭರಿತ ವಾದುವು! ಯಾವಳು ತನಗೆ ಪ್ರೀತಿಯ ಪತ್ನಿಯಾಗಿದ್ದಳೋ ಅವಳೇ ಈಗ ತನ್ನ ಭಗಿನಿಯು! ಪ್ರಿಯತಮೆಯು ಪ್ರಿಯಭಗಿನಿಯು! ಎಂತಹ ಅಘಟಿತ ಘಟನೆಯು! ಗೋಕುಲನ ಮನಸ್ಸು ಉನ್ಮತ್ತವಾಯಿತು! ಶರೀರವು ಅದ್ಯಂತ ಬೆವರಿ ಹೋಯಿತು.

ಅಷ್ಟರಲ್ಲಿಯೇ ಉಷಾಕುಮಾರಿಯು ಅಲ್ಲಿ ಪ್ರಕಟವಾದಳು. ಅವಳನ್ನು ನೋಡಿದೊಡನೆಯೇ ಗೋಕುಲನ ನರಗಳಲ್ಲಿ ರಕ್ತವು ಬಿರುಸಾಗಿ ಹರಿಯ ತೊಡಗಿತು. ಒಮ್ಮೆಲೆ ಅವಳ ಕಡೆಗೆ ಧಾವಿಸಿ, ತನ್ನ ವಿಶಾಲಬಾಹುಗಳಿಂದ ಅವಳನ್ನು ಆಲಿಂಗಿಸಿಕೊಂಡು ಹೀಗೆಂದನು:—"ಓ ನನ್ನ ಉಷಾ! ಇಂದಿನಿಂದ ನೀನು ನನ್ನ ಪ್ರಿಯ ತಮೆಯಲ್ಲ! ನನ್ನ ಪ್ರಿಯ ಭಗಿನಿ!" ಎಂದನು. ಉಷೆಗೆ ಎಲ್ಲವೂ ತಿಳಿದು ಹೋಯಿತು.

× × × × × ×

ಉಷಾ ಗೋಕುಲರು ಎಲ್ಲಿಗೆ ಹೋದರೋ ನಮಗೆ ಗೊತ್ತಿಲ್ಲ. ಶ್ರೀನಗರದ ನಿವಾಸಿಗಳಿಗೂ ಗೊತ್ತಿಲ್ಲ. ಈ ಕಥೆಯು ನಡೆದು ಅನೇಕ ವರ್ಷಗಳಾದುವು. ಅವ ರಿಬ್ಬರೂ ಜನರ ತಿಳುವಳಿಕೆಯಿಂದ ಅದೃಶ್ಯರಾಗಿರುವರು! ಆದರೆ ಈಗಲೂ ಶ್ರೀನಗರ ನಿವಾಸಿಗಳು ಗೋಕುಲದಾಸನ ಹಾಗೂ ಉಷಾಕುಮಾರಿಯ ವಿಷಮ ವಿವಾಹದ ಕತೆ ಯನ್ನು ಆಗಿಂದಾಗ್ಯೆ ಹೇಳುತ್ತಿರುವರು.

++ o ++

(ಭಾಮಿನೀ ಷಟ್ಪದಿ)

[ಶರತ್ಕಾಲ ಸೂರ್ಯಗ್ರಹಣ ಸಮಯದಲ್ಲಿ ಕೃಷ್ಣಾ ನದಿಯ ಮೇಲೆ]

ಯಾತ್ರಿಕ:— ನದಿಯ ತೆರೆಗಳು!
ಅಂಬಿಗ:— ಅಲ್ಲ
ಯಾತ್ರಿಕ:— ಕೃಷ್ಣೆಯು ।
ಗದಗದನೆ ನಡುಗುವಳಿ?
ಅಂಬಿಗ:— ಏತಕೆ? ।
ಯಾತ್ರಿಕ:— ಇದು ಶರತ್ಕಾಲವು ಸುಶೀತಲ ವಾತದಾಗಮದಿಂ ॥
ಅಂಬಿಗ:— ಇದಸಮಂಜಸ ಜಡಭರಿತೆಗೈ ।
ಯಾತ್ರಿಕ:— ಗದಗದವು ತೋಳ್ಬಡಿಯೆ ಕಲ್ಲಿಗೆ ।
ಅಂಬಿಗ:— ಮುದದಿ ನಿತ್ಯವು ಕಲ್ಗಳೊಳು ಚರಿಪಳಿಗಿದೇಂ ಸರಿಯೇ ॥ ೧ ॥

ಯಾತ್ರಿಕ:— ಸರಿಸರಿಯೆ; ಜಲಜಂತುಗಳು ಸರ ।
ಸರನೆ ಹರಿದಾಡುವವವದರಿಂ ।
ಅಂಬಿಗ:— ಅರೆರೆ ಮಕ್ಕಳನೆಲ್ಲ ಭಯಪಡುವಳೆ ನದೀ ದೇವಿ ॥
ಯಾತ್ರಿಕ:— ಕರಸಹಸ್ರಗೆ ಗ್ರಹಣಮೆಂದೇಂ? ।
ಅಂಬಿಗ:— ಅರಿಯಳೇನ್ಶೆ ಅಲ್ಪಕಂಟಕ! ।
ಯಾತ್ರಿಕ:— ಸರಿ. ತಿಳಿಯಿತ್ಶೆ ಪಾಪಿ ಜನರನು ನೋಡಿ ನಡುಗುವಳು ॥ ೨ ॥

(ಕಂದಪದ್ಯ)

ಅಂಬಿಗ:— ಪಾಪವ ಕಳೆಯಲು ನಿಂದಿಹ ।
ಶ್ರೀ ಪಾವನ ಚರಿತೆ ಮಲನ ತಡೆಯದೆ ಕಳೆವಳ್ ॥
ಯಾತ್ರಿಕ:— ಓ! ಪೊಳೆಯದು!!
ಅಂಬಿಗ:— ತಿಳಿಕೆಲಜನ ।
ಪಾಪಂ ಗೈಯುವುದಕೆ ಬರುವರೆಂದು ನಡುಗುವಳ್ ॥ ೩ ॥

'ಜೋಗಿರಾಯ' ಹೈದರಾಬಾದ್.

++ o ++

(೧ನೇ ಪುಟದಿಂದ ಮುಂದರಿಸಿದ್ದು.)

ನ್ನು ಮೇ ತಿಂಗಳೊಳಗೆ ಅಗತ್ಯವಾಗಿ ಮನಿಯಾರ್ಡರು ಮಾಡ ಬೇಕಾಗಿ ಕೋರುತ್ತೇವೆ. ಅಲ್ಲದಿದ್ದರೆ ವಿಶೇಷ ಸಂಚಿಕೆಯನ್ನು ವಿ. ಪಿ. ಮಾಡುತ್ತೇವೆ.

ಚಂದಾ ಅವಧಿಯ ಸೂಚನೆಯನ್ನು ಕೊಟ್ಟರೂ ಹಣವನ್ನು ರವಾನಿಸದೆ ಅಥವಾ ಪತ್ರಿಕೆಯು ಬೇಕೋ ಬೇಡವೋ ಎಂದು ಉತ್ತರ ಬರೆಯುವಷ್ಟು ಔದಾರ್ಯವನ್ನು ತೋರದೆ, ಕ್ರಮದಂತೆ ವಿ. ಪಿ. ಯನ್ನು ರವಾನಿಸಿದರೆ ಹಾಗೆ ಅನಿವಾರ್ಯವಾಗಿ ಬಂದ ವಿ. ಪಿ.ಯನ್ನು ಹಿಂದೆ ಬಿಡು ವವರೂ ಇದ್ದಾರೆಂದು ನಮ್ಮ ಅನುಭವದಿಂದರಿತಿದ್ದೇವೆ. ಅಂತಹವರ ಸಂಖ್ಯೆಯು ಹೆಚ್ಚಿ, ಕೆಲ ಪತ್ರಿಕೆಗಳು ಘೋರ ನಷ್ಟ ಸಂಕಷ್ಟಗಳಿಗೆ ಸಿಕ್ಕಿ ಬಾಲಗ್ರುಹ ದಿಂದ ತೀರಿಹೋದ ಸಂದರ್ಭಗಳೂ ಇವೆ. ಅಂತಹ ವಿಪನ್ನಾವಸ್ಥೆಯನ್ನು "ಬಡವರ ಬಂಧು"ವಿಗೆ ಆದರ ಯಾವ ಚಂದಾದಾರ ಮಹಾಶಯರೂ ತಂದೊಡ್ಡಲು ಸಿದ್ಧರಿರುವ ರೆಂದು ನಾವು ಎಷ್ಟಕ್ಕೂ ತಿಳಿಯೆವು.

# ಕಿಂಗ್ಸ್ಲೀ ಹಾಲ್.

(ಲಂಡನ್ ನಗರ ನಿವಾಸಿಗಳಾಗಿರುವ “ಚಿತ್ರಗುಪ್ತ”ರಿಂದ)



ಗಾಂಧಿ ಇಳಿದಿದ್ದ ‘ಕಿಂಗ್ಸ್ಲೀ ಹಾಲ’ನ್ನು ನೋಡಬೇಕೆಂಬ ಹುಚ್ಚು ನನಗೆ ಬಹಳ ದಿನಗಳಿಂದ ಇತ್ತು. ದೊಡ್ಡ ದೊಡ್ಡ ಸ್ಥಳಗಳನ್ನೆಲ್ಲ ಬಿಟ್ಟು, ಯಾರೂ ಕೇಳದಿದ್ದ ಆ ಗೊಂದಿಯಲ್ಲಿ ಹೋಗಿ ಸೇರಿಕೊಂಡನಲ್ಲ, ಆ ‘ಹುಚ್ಚು ಮನುಷ್ಯ’ ಆ ಸ್ಥಳದಲ್ಲಿ ಪಿಕ್ಕೆಡೆಲ್ಲಿಯಲ್ಲಿಲ್ಲದ ಅತಿಶಯವೇನಿದೆಯೋ ನೋಡೋಣವೆಂದು ನನ್ನ ಇಂಗ್ಲಿಷ್ ಸ್ನೇಹಿತರೊಬ್ಬರನ್ನು ಹಿಡಿದು ಚಿತ್ರಹಿಂಸೆ ಮಾಡಿ, ಅವರನ್ನೂ ಸಾಗಿಸಿಕೊಂಡು ಹೋದೆ.

ನಿಜ ಸ್ವಾಮಿ; ಕಿಂಗ್ಸ್ಲೀ ಹಾಲಿರುವ ಸ್ಥಳದಲ್ಲಿ ಎಲ್ಲೆಲ್ಲಿಯೂ ಇಲ್ಲದ ಸೌಂದರ್ಯವುಂಟು! ಪಿಕ್ಕೆಡೆಲ್ಲಿಯ ಆಡಂಬರದ ಸೌಂದರ್ಯವಲ್ಲ; ಬಡತನದ ನಗ್ನ ಸೌಂದರ್ಯ! ಕಿಂಗ್ಸ್ಲೀ ಹಾಲಿರುವುದು ‘ಬೌ’ ಎಂಬ ಸ್ಥಳದಲ್ಲಿ. ಅಲ್ಲಿ ಸುತ್ತುಮುತ್ತಲು ಬಡವರ ವಾಸಸ್ಥಾನಗಳು. ಕಿಂಗ್ಸ್ಲೀ ಹಾಲಿನ ಮಹಡಿನ ಮೇಲೆ ನಿಂತು ನೋಡಲು ನಮ್ಮ ದೃಷ್ಟಿಯು ಬಡವರ ಕುಟೀರಗಳ ಮೇಲೆ ಹಾದು ಲಂಡನ್ ನಗರದ ಮುಖ್ಯ ಸ್ಥಳಗಳ ಮೇಲೆ ಹೋಗಿ ನಿಲ್ಲುತ್ತದೆ.

ನಾವು ಹೋಗಿ ‘ಬೌ’ ಏರಿದಾಗ ರಾತ್ರಿ ಏಳುವರೆ ಘಂಟೆಯಾಗಿತ್ತು. ಬೀದಿಗಳಲ್ಲಿ ತಲೆ ಕೆದರಿಕೊಂಡು ಬಡವರ ಮಕ್ಕಳು ಒಬ್ಬರ ಮೇಲೊಬ್ಬರು ಬಿದ್ದು ಆಟವಾಡುತ್ತಿದ್ದರು. ಯುವಕ ಯುವತಿಯರ ಸರಸ ಸಲ್ಲಾಪಗಳು ನಡೆಯುತ್ತಿದ್ದುವು. ‘ಬೌ’ನ ಈ ವಿಚಿತ್ರ ಸೌಂದರ್ಯವನ್ನು ನೋಡಿಕೊಂಡು ಮುಂದೆ ಸಾಗಿದೆವು. ನನ್ನ ಸ್ನೇಹಿತರು ಹಾಗೆಯೇ ಒಂದು ಸಂದಿಯಲ್ಲಿ ತಿರುಗಿ ಹೊರಟರು. ನಾನೂ ಹಿಂಬಾಲಿಸಿದೆ. ಎದುರಿಗೇ ಕಿಂಗ್ಸ್ಲೀ ಹಾಲ್! ಗಾಂಧಿಯವರು ಅಲ್ಲಿಳಿದು ಆ ಬಡಪಾಯಿಗಳ ಜೀವನದಲ್ಲಿ ಒಂದು ಹಣತೆಯನ್ನು ಹಚ್ಚಿಟ್ಟಿದ್ದರು.

ನಮ್ಮನ್ನು ನೋಡಿದೊಡನೆ ಅಲ್ಲಿಯವರು ಬಹಳ ಆದರದಿಂದ ಬರಮಾಡಿಕೊಂಡರು. ಕೂಲಿಗಾರರೊಬ್ಬರು ನಮ್ಮನ್ನು ಕಿಂಗ್ಸ್ಲೀ ಹಾಲನ್ನು ತೋರಿಸಲು ಕರೆದುಕೊಂಡು ಹೋದರು.

ಕಿಂಗ್ಸ್ಲೀ ಹಾಲನ್ನು ಪ್ರವೇಶಮಾಡುತ್ತಲೇ ಒಂದು ದೊಡ್ಡ ಹಜಾರ. ಅಲ್ಲಿ ಸುತ್ತಮುತ್ತಲಿನವರೆಲ್ಲ ಸೇರಿ ಪ್ರಾರ್ಥನೆ ವಿಹಾರ ಇತ್ಯಾದಿಗಳನ್ನು ಮಾಡುವ ಪದ್ಧತಿಯಂತೆ. “ಇಲ್ಲಿ ನೋಡಿ; ಈ ಸ್ಥಳದಲ್ಲಿ ಗಾಂಧಿಯವರು ಬೆಳಗಿನ ಝಾಮ ನಾಲ್ಕು ಘಂಟೆಗೆ ಇಳಿದು ಬಂದು ಪ್ರಾರ್ಥನೆ ಮಾಡುತ್ತಿದ್ದರು” ಎಂದು ನಮ್ಮನ್ನು ಕರೆದು ತಂದಾತ ಹೇಳಿದ.

ಅಲ್ಲಿ ನಿಂತು ಸ್ವಲ್ಪ ಧ್ಯಾನ ಮಾಡಿದೆ. ಗಾಂಧಿಯವರ ಚಿತ್ರ ನನ್ನ ಮನಸ್ಸಿನಲ್ಲಿ ಬಂದು ನಿಂತಿತು. ಭಾರತ ಭೂಮಿಯ ಸೇವೆಯಲ್ಲಿ ಬಡವಾದ ಅವರ ಶುಷ್ಕ ದೇಹವು ಜ್ಯೋತಿರ್ಮಯವಾಗಿ ನನ್ನ ಮುಂದೆ ಬಂದು ನಿಂತಿತು.

‘ರಘುಪತಿ ರಾಘವ ರಾಜಾರಾಮ ।
ಪತಿತಪಾವನ ಸೀತಾರಾಮ’ ॥

ಎಂಬ ಮಧುರ ಗಾನವು ಏಳು ಸಾವಿರ ಮೈಲುಗಳಿಂದ ತೂರಿಕೊಂಡು ನನ್ನ ಕಿವಿಯನ್ನು ಮುಟ್ಟಿದಂತೆ ಭಾಸವಾಯಿತು.

“ಹೀಗೆ ದಯಮಾಡಬೇಕು! ಇನ್ನೂ ನೋಡುವುದು ಬಹಳ ಇದೆ” ಎಂದು ನಮ್ಮೊಡನೆ ಬಂದಾತ ಹೇಳಿದ.

“ಕ್ಷಮಿಸಬೇಕು. ಮೈಮರೆತಿದ್ದೆ” ಎಂದು ಹಿಂಬಾಲಿಸಿದೆ.

ಅಲ್ಲಿಂದ ಮುಂದೆ ‘ಸೂರ್ಯಾಲಯ’. ಅಲ್ಲಿ ‘ಆತಪಸ್ನಾನ’ವನ್ನು ಅಲ್ಲಿಯ ಜನರು ಮಾಡುತ್ತಾರೆಂದು ಹೇಳಿದ.

“ಗಾಂಧಿಯವರಿಳಿದಿದ್ದ ಸ್ಥಳಕ್ಕೆ ಹೋಗೋಣವೇ?” ಎಂದು ಕೇಳಿದ.

ಅತ್ಯಾನಂದದಿಂದ ಹೊರಟೆ. ಮಹಡಿಯ ಮೇಲೆ ಸುಮಾರು ಆರು ಅಡಿ ಉದ್ದ ಇದ್ದ ಒಂದು ಚಿಕ್ಕ ಮನೆ; ಅದರಲ್ಲಿ ಎರಡು ಚರಕಗಳು; ಒಂದು ಚರಕದ ಮೇಲೆ ಒಂದು ಬಿಳಿಯ ಟೋಪಿ; ಮತ್ತೊಂದರ ಮೇಲೆ ರಾಷ್ಟ್ರಧ್ವಜ, ಒಂದು ಮೂಲೆಯಲ್ಲಿ ಪಾದರಕ್ಷೆ; ಗೋಡೆಯ ಮೇಲೆ ಗಾಂಧಿಯವರ ಪಟ; ಒಂದು ಪಟದ ಮೇಲೆ ಗಾಂಧಿಯವರೇ ಸ್ವಹಸ್ತಾಕ್ಷರದಿಂದ “ಸತ್ಯವೇ ದೇವರು” ಎಂದು ಇಂಗ್ಲಿಷಿನಲ್ಲಿ ಬರೆದಿದ್ದಾರೆ.

ಪಾದರಕ್ಷೆಯನ್ನು ತೆಗೆದುಕೊಂಡು, “ಇದನ್ನು ಗಾಂಧಿಯವರು ಉಪಯೋಗಿಸುತ್ತಿದ್ದರು. ಅವರು ಬಿಟ್ಟು ಹೋಗಿದ್ದಾರೆ” ಎಂದ.

ಅದನ್ನು ಕೈಲಿ ತೆಗೆದುಕೊಂಡು ಪರೀಕ್ಷಿಸಿದೆ. ಮೂಳೆಗಳೆಲ್ಲ ನಡುಗುವಂತಹ ಇಲ್ಲಿನ ಚಳಿಯಲ್ಲಿ—ಆ ಪಾದರಕ್ಷೆಯನ್ನು ಹಾಕಿಕೊಂಡು ತಿರುಗಿದವನ ಮನೋದಾರ್ಢ್ಯವೆಷ್ಟಿರಬೇಕೆಂದು ಮುಗ್ಧನಾದೆ.

ಅಲ್ಲಿದ್ದ ಟೋಪಿಯನ್ನು ತೆಗೆದುಕೊಂಡು “ಇದನ್ನು ಗಾಂಧಿಯವರೇ ನೂತರು ......ನಮಗೋಸ್ಕರ ಬಿಟ್ಟುಹೋದರು......ಅವರಿದ್ದಾಗ ಎಷ್ಟು ಗಲಾಟೆ ಎಂತೀರ, ಸ್ವಾಮಿ!......ಬರೋರೆಷ್ಟು ಜನ; ಹೋಗೋರೆಷ್ಟು ಜನ!......ಅವರು ಮಂಚದ ಮೇಲೆ ಮಲಗಿದ್ಲೇ ಇಲ್ಲ!......ನೆಲದ ಮೇಲೆ ಕಂಬಳಿ ಹಾಸಿಕೊಂಡು ಮಲಗುತ್ತಿದ್ದರು......ಇಲ್ಲಿನ ಮಕ್ಕಳಿಗೆಲ್ಲ ‘ಗಾಂಧಿ’ಯೆಂದರೆ ಬಹಳ ಸಲಿಗೆ. ಅವರಿಗೆ ಮಕ್ಕಳೇ ಮೈಗಾವಲು......ಅವರೊಬ್ಬ ವಿಚಿತ್ರ ಪುರುಷರು, ಸ್ವಾಮಿ!......ಎಷ್ಟೋ ಜನರನ್ನು ನೋಡಿದ್ದೇವೆ; ಅಂತಹ ಮನುಷ್ಯರನ್ನು ನಾವು ನೋಡಿಲ್ಲ” ಎಂದ. ನಾನು ಮೂಕನಾದೆ; ಸನ್ನಿವೇಶ ಅಂತಹುದು.

ಅಲ್ಲಿಂದ ಮುಂದೆ ಹೊರಟೆವು. ಮಹಡಿಯ ಮೇಲೆ ಒಂದು ಸಣ್ಣ ಕೈತೋಟ; ಅದರಲ್ಲಿನ ಗಿಡಬಳ್ಳಿಗಳು ಶರದೃತುವಿನ ಮಹಾ ಸಮಾಧಿಯಲ್ಲಿ ಸೇರಿ ಹೋಗಿದ್ದುವು; ಒಂದು ಸಣ್ಣ ಕೊಳ, ಅದರಲ್ಲಿ ಸಣ್ಣ ಸಣ್ಣ ಮೀನುಗಳು. “ಮಕ್ಕಳು ಇಲ್ಲಿಗೆ ಬಂದು ಆಟವಾಡುತ್ತಾರೆ” ಎಂದ. ಮುಂದೆ ಹೋದರೆ ಒಂದು ಪುಸ್ತಕ ಭಾಂಡಾರ. ಅದರಲ್ಲೊಂದು ಗಾಂಧಿಯವರ ಚಿತ್ರ. ಬಹಳ ಮುದ್ದಾಗಿದೆ. ನನ್ನ ಯೋಗ್ಯತೆಗೆ ತಕ್ಕಂತೆ ವರ್ಣಿಸುತ್ತೇನೆ......ನಗಬೇಡಿ; ಅಷ್ಟೆ!

ಸೂರ್ಯಾಸ್ತವಾಗುತ್ತಿದೆ. ಎರಡು ಬೆಟ್ಟಗಳ ನಡುವೆ ನುಸಿದು ಎಲ್ಲಿಯೋ ಮಾಯವಾಗಿರುವ ಕೊನೆಯಿಲ್ಲದ ದಾರಿ. ಗಾಂಧಿಯವರು ಮೊಣಕಾಲ ಮೇಲಕ್ಕೆ ಪಂಚೆಯುಟ್ಟು, ಪಂಚೆ ಹೊದ್ದು, ಕೋಲನ್ನು ಹಿಡಿದು, ಸೂರ್ಯಾಸ್ತದ ಕಡೆಗೆ ಹೋಗುತ್ತಿದ್ದಾರೆ. ಅವರ ಮುಖದರ್ಶನ ನಮಗಿಲ್ಲದಂತಾಗಿದೆ. ಸೂರ್ಯನು ಮೆಲ್ಲಮೆಲ್ಲನೆ ದೂರದ ಒಂದು ಬೆಟ್ಟದ ಹಿಂದೆ ಜಾರಿ ಹೋಗುತ್ತಿದ್ದಾನೆ. ಕೆಳಗೆ “ನನ್ನ ಜನರನ್ನು ಬಿಟ್ಟು ಬಿಡಿ!” ಎಂಬ ಗಾಂಧಿಯವರ ವಾಕ್ಯವಿದೆ.

ಈ ವರ್ಣನೆಗೆ ಒಗ್ಗರಣೆ ಸಾಲದೆಂದು ನನಗೆ ಗೊತ್ತು. ಇದನ್ನು ಓದಲು ನೀವೇ ಊಹಿಸುವುದು ಮೇಲು.

ಅಲ್ಲಿಂದ ಕೆಳಕ್ಕೆ ಬಂದೆವು. ಅಲ್ಲಿ ಯುವಕ ಯುವತಿಯರ ಕ್ರೀಡಾಂಗಣ, ಚೆಂಡಾಟ, ಸಂಗೀತ, ನೃತ್ಯಗಳಿಗನುಕೂಲವಾದ ಸಾಮಗ್ರಿಗಳು.

ಕೆಳಗೆ ಒಂದು ಸಭೆ ಸೇರಿತು. ಸಭೆಯೆಂದರೆ ಬೆಂಗಳೂರು ಗಾಂಧೀ ಮೈದಾನದಂತಹ ಸಭೆಯಲ್ಲ. ಸುಮಾರು ಹತ್ತು ಹದಿನೈದು ಜನದ ಸಣ್ಣ ಸಭೆ. ಎಲ್ಲರೂ ಕೂಲಿಕಾರರ ದರ್ಜೆಯವರು ಸೇರಿದ್ದರು. ಅವರಲ್ಲಿ ಕೆಲವರು ಯುದ್ಧಕ್ಕೆ ಹೋಗಿ ಬಂದಿದ್ದವರು. ಆ ದಿನ ‘ದೇಶಭಕ್ತಿ’ ಅಂಬುದು ಚರ್ಚೆಯ ವಿಷಯ.

ಇವರಲ್ಲಿ ಒಬ್ಬರು “ದೇಶಭಕ್ತಿಯೆಂದರೆ ಯುದ್ಧಕ್ಕೆ ಹೋಗಿ ಪ್ರಾಣ ಕೊಡುದಲ್ಲ......ದೇಶಕ್ಕೋಸ್ಕರ ಬದುಕುವುದನ್ನು ಕಲಿಯುವುದೇ ನಿಜ ‘ದೇಶಭಕ್ತಿ’ ಎಂದು ಹರಟೆಗೆ ಪ್ರಾರಂಭಿಸಿದರು.

ಮತ್ತೊಬ್ಬರು, “ಎಲ್ಲಾದರೂ ಉಂಟೇ? ದೇಶದ ಉಪ್ಪು ತಿಂದು, ದೇಶಕ್ಕೆ ಪ್ರಾಣ ಕೊಡದಿದ್ದರೆ ಅದೆಂತಹ ದೇಶಭಕ್ತಿ?” ಎಂದರು.

(೧೪ನೇ ಪುಟಕ್ಕೆ ಮುಂದರಿಸಿಯದೆ.)

# "ಹ"ಕಾರನ ಹಾಳು ಹರಟೆ.

ಬರೆದವರು: ಶ್ರೀ। ಕೃಷ್ಣಯ್ಯಶೆಟ್ಟಿ, ಶಾಲಾ ಉಪಾಧ್ಯಾಯ, ಮುದ್ರಾಡಿ.



ಹನ್ನೆರಡನೆ ಇಸವಿ ಹನ್ನೆರಡನೆ ತಿಂಗಳು ಹನ್ನೆರಡನೆ ತಾರೀಕು ಹಗಲು ಹನ್ನೆರಡು ಹೊಡೆವಾಗ ಹರಿಹರಪುರದ ಹರಿಹರರಾಯನ ನಾಲ್ವತ್ತ ಒಂಭತ್ತನೆ ಹುಡುಗ ಹಕಾರನು ಹಾಳು ಹರಟೆ ಹೊಡೆಯಲು ಹೊರ ಹೊರಟನು. ಹಾದಿಯಲ್ಲಿ ಹಾರುವ ಹದ್ದೂ ಹರಿಯುವ ಹಾವೂ ಹಾದು ಹೋದುವು. ಹಕಾರನು ಹರಿಗ ಹತ್ತು ಹರಕೆಗಳನ್ನು ಹೊತ್ತನು—ಹಾಳು ಶಕುನವಾಯಿತು ಅಂತ. ಹೆಣ್ಣು ಹೊನ್ನುಗಳ ಹಂಬಲ ಹರಿದೊಗೆದ ಹರಿದಾಸರಂತೆ ಹರಿನಾಮವನ್ನು ಹಾಡುತ್ತಾ, ಹನುಮಂತನಂತೆ ಹಾರುತ್ತಾ ಹಕಾರನು ಹರಿಹರ ಪುರದ ಹರದರಂಗಡಿಗೆ ಹರಿದೈದಿದನು. ಹೊರಟಾಗಲೇ ಹಕಾರನಿಗೆ ಹಾಳು ಶಕುನ! ಹೇಳುವುದೇನು? ಹಾಳು ಹುಳವೊಂದು ಹಕಾರನ ಹಣೆಯನ್ನು ಹರಿದು ಹಾಕಿತು. ಹಕಾರನು ಹರಿದ ನೆತ್ತರನ್ನು ಹತ್ತಿಯಿಂದ ಒತ್ತಿ ಹರಿ ಹರೀ ಎಂದು ಹಲುಬುತ್ತಿದ್ದನು. ಅಂದು ಹರಿದಿನ. ಹರಿಹರಪುರದ ಹರಿದಾಸರೆಲ್ಲ ಹಲವು ಹಾದಿಯಿಂದ ಹಕಾರನನ್ನು ಹುಡುಕುತ್ತಾ ಹರದರಂಗಡಿಗೆ ಹರಿತಂದರು. ಹರಿದಾಸರನ್ನು ಕಂಡ ಹಕಾರನು ಹರುಷಗೊಂಡು ಹರಿಯನ್ನು ಹೊಗಳ ಹತ್ತಿದನು. ಹೇ ಹರಿಯೇ! ಹಕಾರನಾದ ನನ್ನನ್ನು ಹರಸು. ಹೇ ಹಂಕಾರರಹಿತ! ನಿರಾಕಾರ! ನಿರಂಜನ! ಹಕಾರನಾದ ನನ್ನನ್ನು ಹರಸು. ಹೇ ಕಾರುಣ್ಯ ಮೂರುತಿ! ಮಹೇಶ! ಜಗದೀಶ! ಪರಮೇಶ! ಹಕಾರನಾದ ನನ್ನನ್ನು ಹರಸು. ಹೇ ಹೃಷಿಕೇಶ! ನಿನ್ನನ್ನು ನಿರಾಕಾರನೆಂದೂ, ಸಾಕಾರನೆಂದೂ, ಹರಿಯೆಂದೂ, ಹರನೆಂದೂ, ಹೈಮವತಿ (ಕಾಳಿ)ಯೆಂದೂ, ಯೇಹೋವನೆಂದೂ, ಅಲ್ಲಾನೆಂದೂ, ಹಲವರು ಹಲವು ವಿಧದಿಂದ ಹಂಬಲಿಸುವರು. ಹರಿಯೇ, ನೀನು ಆಯಾಯ ಭಕ್ತರ ಭಕ್ತಿಯ ಶಕ್ತಿಯಂತೆ ಅವರವರ ಮನೋಕಾಮನೆಯನ್ನು ಪೂರ್ತಿಗೊಳಿಸುತ್ತಾ ಭಕ್ತರಭವಭಯವನ್ನು ಹೋಗಲಾಡಿಸುತ್ತೀಯೆ! ಹೇ ಮುರಹರ! ಪ್ರಹ್ಲಾದ ರಕ್ಷಕ! ಅಹಲ್ಯೋದ್ಧಾರಕ! ಹಕಾರನಾದ ನನ್ನನ್ನು ಹರಸು. ಯೋಗಿಗಳ ಹೃದಯದಲ್ಲಿ ಹತ್ತಿಕೊಂಡಿರುವ ಹೇ ಹರಿಯೇ! ನನ್ನನ್ನು ಹರಸು. ನಿನ್ನನ್ನು ಹಗಲಿರುಳು ಹಂಬಲಿಸತಕ್ಕವರ ಯೋಗಕ್ಷೇಮವನ್ನು ನೀನೇ ವಹಿಸಿರುತ್ತೀಯೆ. ಹಾಗಾದ ಮೇಲೆ ಹರಿಯೇ ಗತಿಯೆಂದು ಹಂಬಲಿಸತಕ್ಕ ಹಕಾರನಾದ ನನ್ನನ್ನು ಹರಸಲೇ ಬೇಕು. ಹೇ ಹರಿಯೇ! ಹಂಕಾರ ಸಹಿತನಾದ ಹಕಾರನನ್ನು ಹಂಕಾರರಹಿತನನ್ನಾಗಿ ಮಾಡಿ ಹರಸು'. ಹೀಗೆ ಹಕಾರನು ಹರಿಯನ್ನು ಹೊಗಳಿ ಹರಿದಾಸರೊಡನೆ ಹೀಗೆ ಹೇಳ ಹತ್ತಿದನು. 'ಪ್ರಿಯ ಹರಿದಾಸರೇ! ಹಕಾರನಾದ ನಾನು ಯಾರೆಂದು ವಿವರಿಸಿ ಹೇಳಲೇ? ಹೇಳುತ್ತೇನೆ; ಕೇಳಿರಿ. ನಾನು ಎಂದರೆ ನಾನೆ; ನೀವಲ್ಲ. ಹರಿಹರರಲ್ಲಿ ಮೊದಲಿಗನಾಗಿದ್ದಾನಲ್ಲ! ಆ ಅವನೇ ನಾನು. ಹತ್ತು ಮೊದಲ್ಗೊಂಡು ಹತ್ತೊಂಭತ್ತರ ತನಕ, ಹಸಿಗೂಡಿ ಹಳ್ಳದ ವರೆಗೂ ಹರಡಿದ್ದೇನೆ ನಾನು! ಹುಟ್ಟಿದ ಹುಳ ತುಪ್ಪಟಿಗಳಿಂದ ಹಿಡಿದು ಹೆಬ್ಬುಲಿಯ ತನಕ ಹಬ್ಬಿರುವೆನು—ಹಕಾರನಾದ ನಾನು! ಹಗಲಾಗಲು ಹೊತ್ತು ಹುಟ್ಟಬೇಕಷ್ಟೆ! ಆ ಹೊತ್ತು ಹುಟ್ಟುವುದೇ ನನ್ನಿಂದ. ಕಿಸಕ್ಕ ನಗಾಡಬೇಕಿದ್ದರೆ ಹಕಾರನಾದ ನಾನು ಹಾ ಹಾ ಹಾರಿ ಬರಲೇಬೇಕು. ಹಾಗಿಲ್ಲವಾದರೆ ಹಲ್ಲು ಬಿಟ್ಟು ನೋಡಿರಿ! ಹಾ ಹಾ ಹಿ ಹಿ ಹೂಂ ಹೌದೋ? ಹಕಾರನು ಹೇಳಿದ್ದು? ಹಾಗಿದ್ದಕ್ಕೆಲ್ಲ ಹಕಾರನಿಗೆ ಕಸಾಕಿಸಿಯೇ ಇಲ್ಲ. ಇನ್ನು ಹಾಯರ್ ಗ್ರೇಡ್ ಆಗಬೇಕಾದರೆ ಹೈಸ್ಕೂಲ್ ಆಗಬೇಕಿದ್ದರೆ, ಹೆಡ್‌ಮಾಸ್ತರ ಅಂತ ಆಗಬೇಕಿದ್ದರೂ ಕೂಡ ನನ್ನ ಸಿಫಾರಸು ಬೇಕು. ನೋಡಿ! ಈಗಿನ ಹಳ್ಳಿಯವರು ಪೇಟೆಯಲ್ಲಿ ವಾಸಮಾಡಿ ಹ್ಯಾಟ್ ಬೂಟಿನ ಹವ್ಯಾಸಕ್ಕೆ ಬಿದ್ದು ಹಾಳಾಗಿ ಹೋಗುತ್ತಾರಲ್ಲ! ಹಾಗೆಂದ ಮೇಲೆ ಹಕಾರನಿಗೆ ಹಳ್ಳಿಯ ವಾಸವೇ ಲೇಸಲ್ಲವೇ? ನಾನು ಹಿಂದುವಿನಲ್ಲಿ ಮುಂದೆ ಇದ್ದೇನೆ. ಹಾಗಂತ ಮುಹಮ್ಮದಿಯರಲ್ಲಿ ಮಾತ್ರ ಮಧ್ಯಮ. ಹಾಸ್ಯವೆಂದರೆ ಹಕಾರನಿಗೆ ಹರ್ಷ. ಹಕಾರನು ಹಾಸ್ಯವನ್ನು ಹೊಗಳಬೇಕಾದರೆ ಅದು ಚಮತ್ಕಾರದ ಹೊಸ ಮಾತಾಗಿರಬೇಕು. ಅದಿರಲಿ. "ಹಣ ಎಂದರೆ ಹೆಣ ಬಾಯಿ ಬಿಡುವುದು" ಎನ್ನುವರಲ್ಲ! ಅಂಥ ಹಣದಲ್ಲಿ ನಾನಿಲ್ಲದಿದ್ದರೆ ಅದು ಹೆಣವೆ. "ಹಣವಂತರಲ್ಲಿ ಗುಣವಂತರಿಲ್ಲ" ಎಂದು ಹೇಳುವುದು ಸಹಜ. ಹಣವಿದ್ದಲ್ಲಿ ಗುಣವು ಹೆಣವಾಗಿ ಹೋಗಲೇಬೇಕು. ಅದು ಅದರ ಸಹಜ ಗುಣ. ಹಣವಂತರು ಹರಿಯನ್ನು ಹಂಬಲಿಸಿದ್ದೇ ಆದರೆ ನಾನು ಅವರನ್ನು ಹರಸುವೆನು. ಹಕಾರನಾದ ನಾನು ಹರಸುವುದೇ ತಡ! ಹಣವಂತರು ಗುಣವಂತರೂ ಆಗುತ್ತಾರೆ. ಆಗ ನನ್ನ ಹಾವಭಾವಕ್ಕೆ ಹೆದರಿ ಹಸ್ತಿ ಹಯಗಳು ಹಕಾರನನ್ನು ಮುಂದಿಟ್ಟು ಹಾಯಾಗಿ ಬರುವುದೂ ಉಂಟು. ಹುಟ್ಟಿದಾಗ, ಹುಡುಗನಾಗಿದ್ದಾಗ, ಹರೆಯದವನಾದಾಗ, ಹಾಗೆಯೇ ಹಳಬನಾಗುವಾಗಲೂ ಹಕಾರನು ಇದ್ದೇ ಇರುವನು. ಹಬ್ಬ ಬರುವುದೇ ತಡ! ಹಕಾರನು ಹಾಜರು ಇದ್ದಾನೆ. ಹಬ್ಬ ಬಂದಾಗ ಹುಡುಗ ಹುಡುಗಿಯರೆಲ್ಲ ಹರುಷದಿಂದ ಹಾರುತ್ತಾರಲ್ಲ! ಏನು ಕಾರಣ? ಕಾರಣ ಇದೇ ಹಬ್ಬದಲ್ಲಿ ಹಕಾರನ ಸವಾರಿ ಉಂಟೂ ಅಂತ. ಹತ್ತಿಯಲ್ಲಿ ಹಕಾರನು ಹತ್ತಿಕೊಂಡಿರುವುದರಿಂದಲೇ ಹತ್ತಿ ಹಗುರವಾಯಿತು. ಹಾಸಿಗೆಯಲ್ಲಿ ಹಾ ಎಂದು ಬಿದ್ದುಕೊಳ್ಳುವಾಗ ಹರಿಯನ್ನು ಮರೆತರೂ ಜನರು ಹಕಾರನನ್ನು ಮರೆಯರು. ಹಸಿವೆಯಾದವರು ಹಕಾರನನ್ನು ಹಾರೈಸುತ್ತಾರೆ. ಹಾಲನ್ನ ಹಾಕಿದವರನ್ನೂ, ಹಡೆದವರನ್ನೂ, ಹರಸುವವರನ್ನೂ, ಹಾಗೂ ಹರಿದಾಸರನ್ನೂ ಕೂಡ ಈ ಹಕಾರನು ಎಂದೂ ಮರೆಯನು. ಹಾಲೆಂದರೆ ಹಕಾರನಿಗೆ ಬಲ್ಕುಶಿ. ಹಾಗಂತ ಹಕಾರನನ್ನು ಒಲಿಸಿಕೊಳ್ಳಬೇಕಾದರೆ ತಪಸ್ಸು ಗಿಪಸ್ಸು ಅಗತ್ಯವಿಲ್ಲ. ಬಿಸಿ ಪದಾರ್ಥಕ್ಕೆ ಹಸ್ತ ಹಾಕಿದರೆ ಸೈ! ಹಕಾರನಾದ ನಾನು ಹಾರಿ ಬರುತ್ತೇನೆ. ಇನ್ನು ನೋಡಿ! ರೊಟ್ಟಿಮಾಡಲು ಬೇಕಾದ ಹಿಟ್ಟು ನನ್ನಿಂದ ಮಾಡಲ್ಪಟ್ಟಿದೆ. ಹಕಾರನ ಉಪಕಾರ ಹೇಳಿ ತೀರದೂ ಅಂತ ಹಗಲಿನಲ್ಲಿ ಹಕ್ಕಿ ಸಹ ಹಾಡುತ್ತಿದೆ. ಹರಿಜನರಲ್ಲಿ, ಹನುಮನಲ್ಲಿ ನಾನಿದ್ದೇನೆ. ಹಾಗಿನ್ನು ಮೇಲೆ?

++ ◻ ++

# Some Utterances of Swami Vivekananda.

## ಶ್ರೀ ವಿವೇಕಾನಂದ ಸ್ವಾಮಿಯವರ ಭಾಷಣಗಳಿಂದ ಉದ್ಧೃತವಾದ ಕೆಲವು ಮಾತುಗಳು.

(ಮಂಗಳೂರಿನ ವಿವೇಕಾನಂದ ಸೊಸ್ಯಾಟಿಯವರ ಸಂಗ್ರಹ.)

Some here are miserable for your and my salvation, so that we may serve the Lord coming in the shape of the diseased, coming in the shape of the lunatic, the leper and the sinner.

ಈ ಲೋಕದಲ್ಲಿ ಅನೇಕರು ದುಃಖಿತರಾಗಿರುವುದು ನಾನೂ ನೀವೂ ಮುಕ್ತರಾಗಬೇಕೆಂದು, ರೋಗಗ್ರಸ್ತ, ಭ್ರಾಂತ, ಕುಷ್ಠ ರೋಗಿ, ಪಾಪಿಷ್ಠ, ಈ ಮೊದಲಾದ ರೂಪಗಳನ್ನು ತಾಳಿ ಬರುವ ಪರಮಾತ್ಮನ ಸೇವೆಯನ್ನು ಮಾಡಿ ನಾವು ಬಂಧಮುಕ್ತರಾಗಬೇಕೆಂದೇ.

× × × ×

Where should you go to seek for God,—are not all the poor, the miserable, the weak, gods? Why not worship them first? Why go to dig a well on the shores of the Ganges?

ಪರಮಾತ್ಮನನ್ನು ಹುಡುಕಿ ಏಕೆ ಅಲ್ಲಲ್ಲಿ ಅಲೆದಾಡುವಿರಿ? ದರಿದ್ರರೂ, ದುಃಖಿತರೂ, ದುರ್ಬಲರೂ, ಇವರೆಲ್ಲಾ ಪರಮಾತ್ಮನ ಮೂರ್ತಿಗಳಲ್ಲವೆ? ಇವರ ಸೇವೆಯನ್ನು ಮುಂದಾಗಿ ಏಕೆ ಕೈಕೊಳ್ಳುವುದಿಲ್ಲ? ಗಂಗಾ ತೀರದಲ್ಲಿ ಬಾವಿಯನ್ನು ಏಕೆ ಅಗೆಯುವಿರಿ?

× × × ×

He who has served and helped one poor man seeing Siva in him, without thinking of his caste, or creed, or race, or anything, with him Siva is more pleased than with the man who sees Him only in temples.

ಕೆಲವರು ಶಿವ ಮೂರ್ತಿಯನ್ನು ದೇವಾಲಯಗಳಲ್ಲಿ ಮಾತ್ರ ಕಾಣುವರು; ಆದರೆ ಯಾವಾತನು ಒರೇ ಒಬ್ಬ ಭಿಕ್ಷುಕನಲ್ಲಿ ಪರಮಾತ್ಮನ ಮೂರ್ತಿಯನ್ನು ಕಂಡು ಜಾತಿ, ಕುಲ, ಮತಗಳನ್ನು ವಿಚಾರಿಸದೆ ಆ ಭಿಕ್ಷುಕನ ಸೇವೆಯನ್ನು ಮಾಡುತ್ತಾನೋ, ಆತನಲ್ಲಿ ಶಿವನ ಅನುಗ್ರಹವು ಅಧಿಕವಾಗಿರುವುದು.

× × × ×

What vain gods shall we go after and yet cannot worship the God that we see all round us, the Virat? ......These are all our gods—men and animals and the first gods we have to worship are our own countrymen.

ನಮ್ಮ ಸುತ್ತಲೂ ಎಲ್ಲೆಲ್ಲಿಯೂ ಕಂಡು ಬರುವ ಈ ‹ವಿರಾಟ್› ಸ್ವರೂಪಿಯಾದ ಪರಮಾತ್ಮನನ್ನು ಪೂಜಿಸದೆ, ನಿಷ್ಫಲವಾದ ಅನ್ಯದೇವತೆಗಳ ಈ ಅನ್ವೇಷಣವೇತಕ್ಕೆ? ಮನುಷ್ಯರೂ ಪ್ರಾಣಿಗಳೂ ಇವರೀಗ ನಮ್ಮ ಯಾವತ್ತೂ ದೇವತೆಗಳು ಮತ್ತು ನಾವು ಪೂಜಿಸಬೇಕಾದ ದೇವತೆಗಳಲ್ಲಿ ನಮ್ಮ ಸ್ವದೇಶ ಬಾಂಧವರೇ ಅಗ್ರಗಣ್ಯರು.

× × × ×

After so much *tapasya* I have known that the highest truth is this: “He is present in every being! These are all the manifold forms of Him. There is no other God to seek for! He alone is worshipping God, who serves all beings.”

ಇದು ವರೆಗೆ ತಪಸ್ಸನ್ನು ಮಾಡಿ, ನನಗೆ ತಿಳಿದಿರುವ ಮಹತ್ತಾದ ತತ್ವವು ಇದೇ— ಪರಮಾತ್ಮನು ಎಲ್ಲ ವಸ್ತುಗಳಲ್ಲಿಯೂ ಇರುವನು. ಕಾಣುವ ವ್ಯಕ್ತಿಗಳೆಲ್ಲವೂ ಆತನ ಅನೇಕವಾದ ರೂಪಗಳು. ನಾವು ಇನ್ನು ಹುಡುಕಬೇಕಾದ ಬೇರೆ ದೇವರಿಲ್ಲ. ಸಕಲ ಪ್ರಾಣಿಗಳ ಸೇವೆಯೇ ಯಥಾರ್ಥವಾದ ದೇವಪೂಜೆ.

× × × ×

No religion on earth preaches the dignity of humanity in such a lofty strain as Hinduism, and no religion on earth treads upon the necks of the poor and the low in such a fashion as Hinduism. Religion is not at fault, but it is the Pharisees and Saducees.

ಹಿಂದೂ ಧರ್ಮದಂತೆ ಮನುಷ್ಯನ ಮಹತ್ವವನ್ನು ಅಷ್ಟೊಂದು ಗಂಭೀರವಾಗಿ ಬೋಧಿಸುವ ಬೇರೊಂದು ಧರ್ಮವು ಭೂಲೋಕದಲ್ಲಿ ಇಲ್ಲ; ಪರಂತು, ಹಿಂದೂ ಧರ್ಮದಂತೆ ದೀನ ದಲಿತರ ಕತ್ತನ್ನು ಮೆಟ್ಟಿ, ನೆಲಕ್ಕೊತ್ತುವ ಬೇರೊಂದು ಧರ್ಮವು ಭೂಲೋಕದಲ್ಲಿ ಇಲ್ಲ. ಇದು ಧರ್ಮದ ದೋಷವಲ್ಲ. ಆದರೆ ಧರ್ಮಾಂಧರಾದ ಮಿಥ್ಯಾಚಾರಿಗಳ ತಪ್ಪು.

× + × ×

May I be born again and again and suffer a thousand miseries so that I may worship the only God that exists, the only God I believe in, the sum—total of all souls, and, above all, my God the wicked my God the miserable, my God the poor of all races and of all species! May these be the special objects of my worship!

ಸತ್ಯವಾಗಿಯೂ ಇರುವ ದೇವರೊಬ್ಬನೆ. ಆತನಲ್ಲದೆ ಬೇರೆ ದೇವರಲ್ಲಿ ನನಗೆ ನಂಬುಗೆಯೆ ಇಲ್ಲ. ಆತನೊಬ್ಬನೆ ಸರ್ವ ಪ್ರಾಣಿಗಳಲ್ಲಿಯೂ ಆತ್ಮಸ್ವರೂಪಿಯಾಗಿ ಇರುವನು. ಹೆಚ್ಚಾಗಿ ಯಾವ ಜಾತಿಯವರೂ ಆಗಲಿ, ಜನಾಂಗದವರೂ ಆಗಲಿ, ದುಃಖಿತರೂ, ದರಿದ್ರರೂ, ದೂಷಿತರೂ ಇವರೇ ನನ್ನ ದೇವರು. ನನ್ನೀ ಇಷ್ಟದೇವತೆಯ ಪೂಜೆಯನ್ನು ಮಾಡಲಿಕ್ಕೆ ಎಷ್ಟು ಜನ್ಮಗಳನ್ನು ತಾಳಲಿಕ್ಕೂ, ಆ ಜನ್ಮಗಳಲ್ಲಿ ಅಪಾರವಾದ ಕೋಟಲೆಗಳನ್ನು ಅನುಭವಿಸಲಿಕ್ಕೂ ನಾನು ಸಿದ್ಧನಾಗಿಯೇ ಇರುವೆನು. ಈ ದರಿದ್ರರೂ, ದುಃಖಿತರೂ, ದೂಷಿತರೂ ಎಂದೆಂದಿಗೂ ನನ್ನ ಇಷ್ಟದೇವತೆಯಾಗಿ ಇರಲಿ.

---

‹ಭಾರತಿ› ಮಾಸಪತ್ರಿಕೆ. ವಾರ್ಷಿಕ ಚಂದಾ ರೂ. ೨—೮—೦ ಇದು ಮೂಲ್ಕಿಯಲ್ಲಿ ಪ್ರಕಟವಾಗಿದೆ. ಉತ್ತಮ ಲೇಖನಗಳನ್ನೊಳಗೊಂಡಿದ್ದು ವೃದ್ಧಿಯ ಆಶೆಯನ್ನು ಹುಟ್ಟಿಸುತ್ತಿದೆ. ಕನ್ನಡಿಗರು ಪ್ರೋತ್ಸಾಹಿಸುವರಾಗಿ ನಂಬುವೆವು.

ಬ್ರಹ್ಮಶ್ರೀ ಸಿದ್ಧಾಂತಿ ಮೊಗೇರಿ [illegible]ನುಪ್ಪ ಅಡಿಗಳಿಂದ ಸೂರ್ಯ ಸಿದ್ಧಾಂತ ರೀತ್ಯಾ ಗುಣಿಸಿ ಪರಿಶೋಧಿಸಲ್ಪಟ್ಟ ಶ್ರೀಮುಖ ನಾಮ ಸಂವತ್ಸರದ ಪಂಚಾಂಗವನ್ನು ಸ್ವೀಕರಿಸಿದ್ದೇವೆ. ಅತ್ಯುತ್ತಮವಿದೆ.

ಶಾ ಕಂಪೆನಿಯವರ ಕೃಪೆಯಿಂದ ನಮಗೆ ಪಂಪನ ಮಂಜುಳ ಫಾರ್ಮಸಿ ಹೆರಿಸನ್ ರೋಡ್ ಕಲ್ಕತ್ತ ಇವರ ನಾಲ್ವಾಣೆ ಕ್ರಯದ ಅಂದವಾದ ಡೈರಿಯೂ ಒಂದು ಕೆಲೆಂಡರೂ [illegible]



# ಸಿರಿಗನ ಸೊಕ್ಕು!

ಲೇಖಕರು:— ಶ್ರೀ। ಮಾದರಬೆಟ್ಟು ರಂಗರಾಯ.




ಈಸೀಚೇರಿಯಿನ ಮೇಲೆ ಕಾಲು ಚಾಚಿ ಬಿದ್ದಿದ್ದಾರೆ! ಕೈಯಲ್ಲಿ ಹಿಡಿದೋದುವ ದೊಡ್ಡ ಪೇಪರು! ಬಾಯಲ್ಲಿ ಸಿಗರೆಟ್ಟಿನ ಹೊಗೆ! ಮಧ್ಯಾಹ್ನದ ಶಾಸ್ತ್ರವಾದುದರಿಂದ ತುಂಬಿದ ಹೊಟ್ಟೆ! ಹೌದು! ಹೆಸರಿಗೆ ತಕ್ಕಂತೆ ಅವರು ಪ್ರತಾಪ ರಾಯರೇ! ಆ ಗುಡ್ಡೆ ಹಳ್ಳಿಯಲ್ಲಿ ಅವರ ಪ್ರತಾಪ ಅಷ್ಟಿಷ್ಟಲ್ಲ! ಈ ಡಾಕ್ಟರರು ಸುತ್ತಮುತ್ತಲಿನ ಬಡ ಜನರಿಗೆ ಕೊಡುವ ತಾಪದಿಂದ, ಇವರೊಡನೆ ಮಾತಾಡುವ ಬಡವರು ಗಡಗಡನೆ ನಡುಗುತ್ತಿದ್ದರು. ಇಷ್ಟೆಂದರೆ ತೀರಿತು. ಈ ಪ್ರತಾಪ ರಾವ್ ಡಾಕ್ಟರರ ವರ್ಣನೆ!

ಅಂಗಳದಲ್ಲೊಂದು ದೈನ್ಯಾರ್ತನಾದ!—"ಅಯ್ಯಾ.........."

ಪ್ರತಾಪ ರಾಯರು ಪೇಪರನ್ನು ಓರೆಮಾಡಿ ಗಂಟುಮೋರೆಯಿಂದ ತಿರುಗಿ ನೋಡಿದರು. ಅಯ್ಯೊ! ಪಾಪ! ನಿಲ್ಲಲಶಕ್ತನಾದೊಬ್ಬ ಭಿಕ್ಷುಕ! ಬೆನ್ನಿಗಂಟಿದ ಅವನ ಹೊಟ್ಟೆಯೂ, ಅತಿ ಕೃಶವಾದ ಅವನ ಗಾತ್ರವೂ, ಹೀನ ದೀನವಾದ ಅವನ ಮುಖಭಾವವೂ ಎಂತಹ ಕಲ್ಲನ್ನಾದರೂ ಕರಗಿಸಿ ಬಿಡುತ್ತಿದ್ದುವು. ಆದರೆ ಪ್ರತಾಪ ರಾಯರ ಹೃದಯವದೆಂತಹ ಕಲ್ಲೊ? ಅವರು ಕಡು ತಿರಸ್ಕಾರದಿಂದ—"ಎಯ್! ಚಿಕ್! ಹೋಗು—ಹೋಗು!" ಎಂದು ದಟ್ಟಿಸಿದರು.

"ಅಯ್ಯೊ! ಹಸಿ—ವೆ!—"ಭಿಕ್ಷುಕನು ಕಡುದೈನ್ಯದಿಂದ ಹೊಟ್ಟೆಯನ್ನು ತೋರಿಸುತ್ತಾ ಚಕ್ಕನೆ ಕುಳಿತನು.

"ಛಿಕ್! ಶನಿ!—ಏ ಕಿಟ್ಟ! ಇವನನ್ನತ್ತ ಹೊರಗೆ ದೂಡೋ! ಹಾಳು ಹೆಣ!"

ಚಾಕರ ಕಿಟ್ಟನು ಓಡಿ ಬಂದು ಭಿಕ್ಷುಕನ ಕರುಣಾಜನ್ಯ ಸ್ಥಿತಿಯನ್ನು ನೋಡಿದನು. ನೋಡಿ ಅವನ ಕರುಳು ಮರುಗಿತು. "ಅಯ್ಯೊ! ಇವನೀ ಅಸ್ತಿಪಂಜರವನ್ನು ಹೊತ್ತುಕೊಂಡು ಇಲ್ಲಿಗೆ ಬಂದದ್ದೇ ಹೆಚ್ಚು!" ಎಂದು ಅಂದುಕೊಂಡನು. ಆದರೂ ಪ್ರತಾಪ ರಾಯರಲ್ಲವೇ? ಕಿಟ್ಟನು ಅಂಜುತ್ತಂಜುತ್ತ—"ಸ್ವಾಮಿ! ಬೆಳಗ್ಗಿನ ಗಂಜಿಯಿಷ್ಟು ಬಾಕಿ........."

ಪ್ರತಾಪ ರಾಯರು ಪೇಪರನ್ನು ಥಪ್ಪನೆ ಕೆಡವಿ, ಏಳುವಂತೆ ನಟಿಸಿ ಕೋಪದಿಂದ ಗರ್ಜಿಸಿದರು—ಏನೋ ಕತ್ತೆ! ನಿನ್ನ......! ಹೇಳಿದ ಹಾಗೆ ಮಾಡೆಂದರೆ......! ನಾಯಿ!"

ಕಿಟ್ಟನು ಸರಸರನೆ ಅಂಗಳಕ್ಕಿಳಿದು ಭಿಕ್ಷುಕನನ್ನು "ಹೋಗು, ನಡೆ," ಎಂದು ಮುಂತಾದ ಹೊರಗಿನ ಮಾತಿನಿಂದ ಬೆದರಿಸಿ, ಕಣ್ಣು ಸನ್ನೆ—ಕೈಸನ್ನೆಗಳ ಅಂತರ್ವಚನದಿಂದ ಸಮದಾಯಿಸಿ ಅವನನ್ನು ಮನೆಯ ಹಿಂಬದಿಯ ಮರೆಯಾದೆಡೆಗೆ ಸಾಗಿಸಿದನು. ಬಡಪಾಯಿಯಾದಾ ಭಿಕ್ಷುಕನು ಎರಡು ದಿನಗಳಿಂದ ಅನ್ನದ ಅಗುಳು ಕಂಡಿರಲಿಲ್ಲ. ಕಿಟ್ಟನು ಕರುಣೆಗೊಂಡು ಒಳಗೆ ಹೋಗಿ ಯಾರಿಗೂ ಅರಿಯದಂತೆ ಒಂದು ಬಾಳೆಲೆಯ ದೊನ್ನೆಯಲ್ಲಿ ಇಷ್ಟು ಉಪ್ಪು ಗಂಜಿಯನ್ನು ಹಾಕಿ ತಂದು ಆ ಬಡ ಭಿಕ್ಷುಕನ ಮುಂದಿಟ್ಟನು. ಹಸಿದು ಕಸಿವಿಸಿಯಾದವನು ಕಿಟ್ಟನನ್ನು ಹರಸಿ ಗಂಜಿಯನ್ನು ಕುಡಿಯತಕ್ಕವನು; ಅಷ್ಟರಲ್ಲಿ ಬಂತಲ್ಲಿಗೆ ಧುಡು ಧುಡು ಪ್ರತಾಪ ರಾಯರ ಸವಾರಿ! ಕೈಯಲ್ಲಿ ಇಷ್ಟುದ್ದದ ಸುರಳೀ ಬೆತ್ತ!

"ಏ ಕತ್ತೆ! ಒಳಗಿದ್ದದ್ದೆಲ್ಲ ನಿನ್ನಿಷ್ಟಾನುಸಾರ ಹಾದಿಹೋಕರಿಗೆ—ಅಂ? "ಬೆತ್ತ ಪೆಟ್ಟು ರಪ್ಪೆಂದು ಕಿಟ್ಟನ ಬೆನ್ನಿಗೆ! ಕಿಟ್ಟನು ಓಡಿದನು! ಪ್ರತಾಪ ರಾಯರು ಭಿಕ್ಷುಕನ ಸಮಾಚಾರಕ್ಕೆ ಹತ್ತಿದರು. ಥೂ! "ಹೆಣ!" ಎಂದು ಬೆತ್ತದಿಂದ ಹೊಡೆದು ಗಂಜೀ ದೊನ್ನೆಯನ್ನು ಕವುಚಿದರು. "ಹಾಳು ರಂಡೆಯ ಮಗ! ಅಧಿಕ ಪ್ರಸಂಗಿ! ಕಳ್ಳ!" ಭಿಕ್ಷುಕನ ಬೆನ್ನಿಗೆರಡು ಛಡಿಗಳೂ, ಎದೆಗೊಂದು ಒದೆತವೂ ಬಿದ್ದುವು; ಅವನು ಆರ್ತನಾದ ಮಾಡುತ್ತಾ ಹಿಮ್ಮಗುಚಿದನು.

"ಅಬ್ಬ! ಇವನ ಕಲ್ಪನೆ? ಏಳಲ್ಲಿಂದ! ಓಡು ಹೊರಗೆ! ಹುಂ, ಓಡು!" ಭಿಕ್ಷುಕನ ಕೃಶಾಂಗದ ಮೇಲೆ ಮತ್ತೆರಡು ಸುರಳೀ ಏಟು!

"ಏ ಕಿಟ್ಟ! ಎಲ್ಲಿರುವೆಯೋ? ಬಾರೋ ಇಲ್ಲಿ!—ತಡೆ! ಎಲ್ಲಿ ಓಡಿದೆಯೋ ನೋಡುವೆನು ನಿನ್ನ ಬೆನ್ನಿನ ಚರ್ಮ ಸುಲಿಯದಿದ್ದರೆ......! ಹುಂ ನಿನ್ನ ಸೊಕ್ಕೆ!"

ಆದರೆ ಕಿಟ್ಟನು ಬರಲಿಲ್ಲ. ಅವನು ಈ ದೃಶ್ಯವನ್ನು ನೋಡಲಾರದೆ ಯಾವ ಮೂಲೆಯಲ್ಲೋ ಅವಿತಿದ್ದನು.

ಮಲಗಿದ್ದ ಪ್ರತಾಪರಾಯರ ಪತ್ನಿಯು ಅಲ್ಲಿಗೆ ಓಡಿ ಬಂದು—"ಅಬ್ಬಾ! ಈ ಭಿಕಾರಿಯ ಸೊಕ್ಕೆ!" ಎಂದು ಉದ್ಗಾರಗರೆದಳು.

ಭಿಕ್ಷುಕನು 'ಹಾ! ಹೂ! ಎನುತ್ತೆದ್ದು, ಹೇಗೋ ನಾಲ್ಕು ಹೆಜ್ಜೆ ಹಿಂದಿಟ್ಟನು. ಹಾಯ್! ಹಾಯ್! ಪುನಹ ಇನ್ನೊಂದು ಸುರಳೀ ಏಟು ಅವನ ಮೇಲೆ ಬಿದ್ದಿತು. ತಾಳಲಾರದೆ ಅವನು ಹಾ! ಎಂದು ಬಡಮ್ಮನೆ ಬಿದ್ದನು. ಕಲ್ಲು ತಾಗಿ ತಲೆಯೊಡೆದು ರಕ್ತವು ಸುರಿಯಹತ್ತಿತು. ಅವನು ಅಸ್ಫುಟವಾಗಿ 'ಹಾ! ಇ—ಸಿರಿ—ಮ—ಸೊಕ್ಕು ಮು—ರಿ—! ಇವ—ನ—ನಾಶ—!" ಸ್ವರವು ನಿಂತಿತು. ಹೌದು. ಅದು ಸಿರಿಮತ್ತನಿಗೆ ಕೊಟ್ಟ ಶಾಪ!

× × × × ×

ಅದೇ ದಿನ ರಾತ್ರೆ. ಘಂಟೆ ೧೦. ಮಲಗುವ ವೇಳೆ. ಪ್ರತಾಪರಾಯರಿಗೆ ಸಿಗರೇಟು ಸೇದಬೇಕಾಯಿತು. ಆದರೆ ಬೆಂಕಿಪೆಟ್ಟಿಗೆ ಬರಿದು; ಹೆಂಡತಿಯೊಡನೆ ಹೇಳಿದರು—"ನಾಲ್ಕು ಬೆಂಕಿಕಡ್ಡಿಗಳನ್ನು ತಾರೆ"ಂದು. ಅವಳು ಕೂಡಲೇ ಅಡಿಗೆ ಮನೆಯೊಳಗೆ ಹೊಕ್ಕಳು. ಕಿಟ್ಟನಿದ್ದಿದ್ದರೆ ಅವನೊಡನೆ ಹೇಳಿ ತರಿಸಬಹುದಾಗಿತ್ತು. ಆದರೆ ಅವನೀ ಕ್ರೂರ ಯಜಮಾನನ ಕ್ರೌರ್ಯವನ್ನು ಸಹಿಸದೆ, ಅಂದೇ ಕೆಲಸಬಿಟ್ಟು ಹೊರಟುಹೋಗಿದ್ದನು. ಸಂಬಳ ಮಾತ್ರ ಸೊನ್ನೆ! ಇರಲಿ.

ಕತ್ತಲೆ. ಪ್ರತಾಪರಾಯರ ಪತ್ನಿ ಹರಡುತ್ತಾ ಒಲೆದಂಡೆಯ ಮೇಲೆ ಬೆಂಕಿಪೆಟ್ಟಿಗೆಯನ್ನು ಹುಡುಕಿದಳು. ಸಿಕ್ಕಿತು—ಅದರಿಂದ ನಾಲ್ಕು ಬೆಂಕಿಕಡ್ಡಿಗಳನ್ನು ತೆಗೆದು ಅದನ್ನು ಪುನಹ ಅಲ್ಲೇ ಹಾಕಿದಳು. ಆಗದು ಒಲೆಯೊಳಗುರುಳಿದುದು ಅವಳಿಗೆ ತಿಳಿಯಲಿಲ್ಲ. ಅವಳು ಸೀದಾ ಮರಳಿದಳು ಶಯನಗೃಹಕ್ಕೆ. ಮುಂದೆ ಸ್ವಲ್ಪ ವೇಳೆಯಲ್ಲೇ ಸರ್ವರಿಗೂ ಗಾಢ ನಿದ್ರೆ.

ಒಲೆಯೊಳಗೆ ಭಿಕ್ಷುಕನ ಶಾಪವು ಒಂದು ಸಣ್ಣ ಕೆಂಡದ ರೂಪವಾಗಿ ಹುದುಗಿತ್ತು. ಅದರ ಮೇಲೆ ತುಂಬಾ ಕಸ ನೊಕ್ಕೆ ಪುಡಿಗಳು. ಕೆಂಡವು ಮೆಲ್ಲನೆ ಹೊಗೆಯುಗುಳಿ ಗಿಮಿದು ಹಿರಿದಾಗಿ ಧಗ್ಗನೆ ಆ ಬೆಂಕಿಪೆಟ್ಟಿಗೆಗೆ ಹಿಡಿದು, ಭಗಭಗನೆ ಒಲೆ ತುಂಬಾ ಉರಿಯು ಹತ್ತಿತು. ಆ ಒಲೆಗೂ ಕಟ್ಟಿಗೆ ಮೂಲೆಗೂ ಜೋಡಾಗಿ ಓಲೆಯೊಂದು ಚಾಚಿಕೊಂಡಿತ್ತು ಅಗ್ನಿಯು ಆ ಮಡಲಿನ ಮೂಲಕವಾಗಿ ಹರಿದು ಬಂದು ಕಟ್ಟಿಗೆ ಮೂಲೆಗೆ ದೊಡ್ಡದಾಗಿ ಹಿಡಿಯಿತು. ಸರಿ! ಕಟ್ಟಿಗೆ ಮೂಲೆಯಿಂದ ಹೊಗೆ ಹಲಿಗೆಗೆ! ಸಿಕ್ಕತ್ತ ಹಿಡಿದು, ಅದು ಕಡಿದು ಬುಡುಬುಡನೆ ಬಿದ್ದವು ಜೆಣ್ಣೆ ಮೊಸರಿನ ಪಾತ್ರೆಗಳು. ಗೂಟವು ಮುರಿದು ಹೊಗೆ ಹಲಿಗೆಯು ನಾನಾ ಪಾತ್ರೆಗಳೊಡನೆ ಧಡಧಡಾಲ್ಲನೆ ಕೆಳಗೆ ಬಿದ್ದಿತು. ಬರಸಿಡಿಲಿನಂತಾದ ಆ ಭಯಂಕರ ಶಬ್ದಕ್ಕೆ ಮನೆಯಲ್ಲಿ ಮಲಗಿದವರೆಲ್ಲರೂ ಗಾಢನಿದ್ರೆಯಿಂದೆಚ್ಚತ್ತು, ಹೌಹಾರಿ ನಕ್ಷತ್ರವೇಗದಿಂದ ಓಡಿಬಂದರು. ಹೊ! ಎಂತಹ ಭೀಕರ ದೃಶ್ಯ! ಅಗ್ನಿನಾರಾಯಣನು ಘೋರಸ್ವರೂಪನಾಗಿ ಉರುಳಿದ ಎಣ್ಣೆಯನ್ನು ಕುಡಿಯುತ್ತಾ. ಅಟ್ಟವನ್ನು ಹಾಯ್ದು, ಮಾಡಿಗಡರಿ ಇನ್ನೇನು ಸಿಗುವುದೆಂದು ತನ್ನ ಕಡುನಿಡುವಾದ ಕೂರ್ನಾಲಗೆಯನ್ನು ಗಗನದೆಡೆಗೆ ಹಾರಿಸುತ್ತಿದ್ದನು. ಮನೆಯ ಒಳಭಾಗವು ಕರ್ವೊಗೆಯಿಂದ ಕಪ್ಪಾಯಿತು.

ಸರಿ! ಬೆಂಕಿಯೇ ಬೆಂಕಿ! ಬೊಬ್ಬೆಯೇ ಬೊಬ್ಬೆ! ಗೌಜಿಯೇ ಗೌಜಿ! ಆದರೂ ಈಗಲೂ ಪ್ರತಾಪರಾಯರ ಪ್ರತಾಪದ ಮಾಹಿಮ್ಮೆಯಿಂದ ಅವರ ಮನೆಯನ್ನುಳಿಸಲು ಯಾರೂ ಹೆಚ್ಚಿನ ಸಾಹಸವನ್ನು ಮಾಡಲಿಲ್ಲ. ಮನೆಯೊಳಗಿದ್ದುದೆಲ್ಲವನ್ನೂ ಅಗ್ನಿನಾರಾಯಣನು ಬೃಹದಾಕಾರಗೊಂಡು ತನ್ನಿಂದಾದಷ್ಟು ಸ್ವಾಹಾ ಮಾಡಿ, ಸಿರಿಗನ ಸೊಕ್ಕನ್ನು ಮುರಿದುಹಾಕಿದನು!

# ಬಡತನ.

ಲೇ:—ಗಣಪತಿ ಶರ್ಮಾ, ಗಣಪತಿ ಹೈಸ್ಕೂಲು, ಮಂಗಳೂರು.



ಸ್ವರ್ಣಭೂಮಿಯಾದ ನಮ್ಮ ಹಿಂದೂದೇಶದಲ್ಲಿ ಬಡತನದ ಮಾರಿಯು ನೆಲೆಯೂರಿ ಬಹು ದಿನಗಳಾದುವು. ಇದರ ಮೊದಲು ಇಲ್ಲಿನ ಸಂಪತ್ತು ಯಾವ ಸ್ಥಿತಿಯಲ್ಲಿತ್ತೆಂಬುದು ಎಲ್ಲರಿಗೂ ತಿಳಿದ ವಿಷಯವೇ, ಅಲ್ಲದೆ ಇತರ ರಾಷ್ಟ್ರಗಳ ದಿನವೊಂದರ ಆಯವು ಹವನುಗಟ್ಟಲೆಯಲ್ಲಿರುವಾಗ, ನಮ್ಮ ಬಡ ಭಾರತದ ಸರಾಸರಿ ಆಯವು ಎರಡು ಆಣೆಗೂ ಕಡಿಮೆಯೆಂದರೆ, ಅದಾವ ಭಾರತೀಯನ ಕಣ್ಣುಗಳಿಂದ ಅಶ್ರುಧಾರೆಯು ಪ್ರವಹಿಸಲಿಕ್ಕಿಲ್ಲ? ಈಗಾಗಲೇ ಈ ರೋಗಕ್ಕೆ ನಮ್ಮ ಜನಾಂಗದ ಅರ್ಧಕ್ಕಿಂತಲೂ ಹೆಚ್ಚಿನ ಜನರು ತುತ್ತಾಗಿರುವರು; ಎಂದರೆ ಹೊಟ್ಟೆಗಿಲ್ಲದೆ ಸಾಯುತ್ತಿರುವರೆಂದರೂ ತಪ್ಪಾಗದು. ಉಳಿದವರು ಕೂಡಾ ದಿವಸ ಹೋದಂತೆಲ್ಲಾ ಈ ಸ್ಥಿತಿಯನ್ನೈದುತ್ತಿರುವರು.

ಬಡತನದ ರೋಗ ಪೀಡಿತರಾದ ಬಡವರ ರಕ್ತವನ್ನು ಹೀರಿ, ತಾವು ಭೋಗಿಗಳಾಗಿ ಬಡ ಒಕ್ಕಲಿಗರೇ ಮೊದಲಾದವರಿಗೆ ಕಷ್ಟ ಕೊಡುತ್ತಿರುವ ಓ ಧನಿಕರೇ! ಬಡ ರೋಗಿಗಳ ರಕ್ತವನ್ನು ನೀವು ಹೀರುತ್ತಿರುವಿರಿ. ಆ ರಕ್ತಕಣಗಳೊಳಗೆ ರೋಗದ ಅಣಿಗಳು ಅಂಟಿಕೊಂಡಿರಬಹುದು. ಅವು ಒಮ್ಮೆ ನಿಮ್ಮ ದೇಹವನ್ನು ಪ್ರವೇಶಿದವೆಂದರೆ, ಈ ರೋಗವು ನಿಮಗೂ ಪಸರಿಸಬಹುದು. ಬಡವರ ಕಷ್ಟವನ್ನರಿಯದೆ, ಅವರ ಹಿತಚಿಂತಕರಾಗದೆ, ಅವರ ಸುಖದುಃಖಗಳಿಗೆ ಕಿವಿಗೊಡದೆ, ವಿಷಯಲಂಪಟರಾಗಿ ಅವರ ಬಿಸಿ ರಕ್ತ ಸಮಾನವಾದ ಹಣವನ್ನು ಸುಲಿದು ಕೆಂಪು, ಬಿಳಿ ಬಿರುದುಗಳಿಗಾಗಿ ವೆಚ್ಚ ಮಾಡುವಿರಿ. ರಷ್ಯದಲ್ಲಾದ ಸ್ಥಿತಿಯು ನೆನಪಿರಲಿ!

ಲೋಕದಲ್ಲಿ ದೊಡ್ಡವನಾರು? ಬಡವನಾರು? ಸ್ಪೃಶ್ಯನಾರು? ಅಸ್ಪೃಶ್ಯನಾರು? ಎಲ್ಲರೂ ಸರಿ. ಬಡವನ ಹಕ್ಕನ್ನು ಅಪಹರಿಸಿಯೇ ಒಬ್ಬನು ದೊಡ್ಡವನೆನಿಸಿಕೊಳ್ಳುವನಲ್ಲದೆ, ಸೃಷ್ಟಿಕರ್ತನ ದೃಷ್ಟಿಯಲ್ಲಿ ಇಬ್ಬರೂ ಸರಿಸಮಾನರೇ. ಅಂಥಾ ದೊಡ್ಡಸ್ಥಿಕೆಯು ಬಡವನ ಕಣ್ಣೀರೆಂಬ ಕಾಲುವೆಯಿಂದ ಕೊಚ್ಚಿಕೊಂಡು ಹೋಗುವ ದಿನವು ಸಮೀಪದಲ್ಲೇ ಬರುವುದು. ಇನ್ನಾದರೂ ಬಡವರ ಕಡೆಗೆ [illegible] ತಿರುಗಿಸಿರಿ. [illegible] ಅವನಿಗೂ ಪ್ರತಿಯೊಂದು [illegible] ಸ್ಥಳಗೊಡಿರಿ. [illegible] ನನ್ನ ದೇವಸ್ಥಾನ ಎಂಬ ಈ ಅಹಂಭಾವವನ್ನು ಬಿಟ್ಟು, ಸಾರ್ವಜನಿಕ [illegible] ಬಡವರಿಗೂ ಪ್ರವೇಶಕೊಡಿರಿ. ವ್ಯರ್ಥವಾಗಿ ಖರ್ಚು ಮಾಡುವ [illegible]ವನ್ನು ಬಡ ಜನರಿಗೆ ಕೊಟ್ಟು, ಅವರನ್ನು ಉದ್ಧರಿಸಿ, ತನ್ಮೂಲಕ [illegible]

[illegible]ಜ್ಞಾನಾಂಧಕಾರದಲ್ಲಿ ಬಿದ್ದು ಹೊರಳಾಡುವ ಸನಾತನಿಗಳೇ! ಬೆಳಗಾಯಿತು! [illegible]ಯಿತು! ಏಳಿ! ನಿಮ್ಮ ಸುಖನಿದ್ರೆಯನ್ನು ಸಾಕು ಮಾಡಿರಿ! ಹಿಂದೂಗಳಾಗಿದ್ದು [illegible] ಧರ್ಮಪರಿಪಾಲಕರಾದ ೭ ಕೋಟಿ ನಿಮ್ಮ ಬಾಂಧವರನ್ನು, ಸ್ವಾರ್ಥಬುದ್ಧಿಯಿಂದ ಇದು ವರೆಗೆ ದೂರ ತಳ್ಳಿರುವಿರಿ. ಇದರ ಪ್ರತಿಫಲವು ಬೇಗನೆ ನಿಮಗೆ ದೊರಕಲಿಕ್ಕಿದೆ. ಸರ್ವರ ತಂದೆಯೂ ಸರ್ವಾಂತರ್ಯಾಮಿಯೂ ಸಕಲ ಚರಾಚರ ವಸ್ತು ಪರಿ[illegible] ಆದ ಭಗವಂತನ ನಾಮೋಚ್ಚಾರಕ್ಕಾಗಿ, ಹಿರಿಯರು ಕಟ್ಟಿಸಿದ ದೇವಸ್ಥಾನ[illegible], ಹರಿಜನ (ಪಂಚಮ)ರನ್ನು ಇನ್ನಾದರೂ ಪ್ರವೇಶಿಸಬಿಡಿರಿ. ಸ್ವಾರ್ಥ[illegible] ಬದುಕಿಲ್ಲ. ವಿಚಾರಾತ್ಮಕ ದೃಷ್ಟಿಯಿಂದ ನೋಡಿರಿ! ಅಜ್ಞಾನದ ಕಣ್ಣನ್ನುಜ್ಜಿಕೊಳ್ಳಿರಿ! ಎಚ್ಚರವಾಗಿರಿ!!!

[illegible] ವರೆಗೆ ನಮ್ಮ ಹಿಂದೂದೇಶವು ಬಡತನವೆಂಬ ಈ ಮಾರಿರೋಗದಿಂದ [illegible]ವುದಿಲ್ಲವೋ ಅಂದಿನ ವರೆಗೆ ನಮಗೆ ಸ್ವಾತಂತ್ರ್ಯ ಸಿಗಲಾರದು. ಆರೆ[illegible] ಗಂಜಿಗೂ ಅರ್ಧ ಮೊಳ ವಸ್ತ್ರಕ್ಕೂ ಗತಿಯಿಲ್ಲದೆ, ಊರ ಹೊರಗಿನ ಕಾಡುಗುಡ್ಡಗಳಲ್ಲಿ ತಲೆ ಮರೆಸಿಕೊಂಡಿರುವ ಆ ಏಳು ಕೋಟಿ ಮಾನವ ಜಂತುಗಳು ಕಣ್ಣೀರಿನ ಕಾಲುವೆ[illegible] ಹರಿಯಗೊಡುತ್ತಿರುವಾಗ ನಮಗೆ ಸ್ವಾತಂತ್ರ್ಯ ಕೊಡುವುದಾದರೂ ಆದೆಂತು?

ಅನ್ಯರ ಕೈಗಾರಿಕೆಗೆ ಬೆರಗಾಗಿ, ಅವರ ಕಲಾ ಕೌಶಲ್ಯಕ್ಕೆ ತಲೆದೂಗಿ, ಅವರು ದಯಪಾಲಿಸಿದುದೇ ದೇವರ ಪ್ರಸಾದವೆಂದು ಸಂತುಷ್ಟರಾಗುವ ಭೋಗಿಗಳೇ! ಇನ್ನಾದರೂ ನಮ್ಮ ಜನರ ಕೈಗಾರಿಕೆಗೆ ಪ್ರೋತ್ಸಾಹ ಕೊಡಿರಿ. ಒಂದಾನೊಂದು ಸಮಯದಲ್ಲಿ ನಮ್ಮ ಹಿಂದೂದೇಶವು ಕೂಡ ಕೈಗಾರಿಕೆಗಳ ಗಣಿಯಾಗಿರಲಿಲ್ಲವೆ? ಇಲ್ಲಿನ ಹೇರಳ ಸಂಪತ್ತನ್ನು ಅನ್ಯರು ಕೇಳಿಯಲ್ಲವೆ, ನಾವು ನಮ್ಮ ದೇಶವನ್ನು ಕಳೆದುಕೊಂಡುದು? ಹಾಗಾದರೆ ನಮ್ಮ ಕೈಗಾರಿಕೆಗಳು ಎಲ್ಲಿ ಲುಪ್ತವಾದವು? ಇಲ್ಲ. ಲುಪ್ತವಾಗಲಿಲ್ಲ. ಗುಪ್ತವಾಗಿವೆ. ಯಾವಾಗ ನಮ್ಮಲ್ಲಿ ನಮ್ಮ ದೇಶ, ನಮ್ಮ ಭಾಷೆ, ನಮ್ಮ ಕೈಗಾರಿಕೆಯೆಂಬ ಸ್ವಾಭಿಮಾನ, ಸ್ವಜನಾಭಿಮಾನ, ಸ್ವದೇಶಾಭಿಮಾನವು ತಲೆದೋರುವುದೋ ಆಗಲೇ ಈ ಕೈಗಾರಿಕೆಗಳ ಆವಿರ್ಭೂತವಾಗುವುದು ನಮ್ಮ ಕೈಗಾರಿಕೆಗಳನ್ನು ನಾವೇ ತಿರಸ್ಕರಿಸಿದೆವೆಂದರೆ ಇನ್ನಾರು ಮೆಚ್ಚುವರು? ಆದಕಾರಣ, ಭಾರತೀಯರೇ, ಇನ್ನಾದರೂ ಸ್ವದೇಶೀ ಸಾಮಾನುಗಳನ್ನೇ ತೆಗೆದುಕೊಂಡು ಕೆಲಸವಿಲ್ಲದ ಬಡಜನರಿಗೆ ಕೆಲಸವನ್ನೊದಗಿಸಿಕೊಟ್ಟು, ಅವರನ್ನು ಕಾಪಾಡಿ ತನ್ಮೂಲಕ ಇಡೀ ದೇಶವನ್ನು ಈ ರೋಗದಿಂದ ಪಾರಾಗುವಂತೆ ಮಾಡಿ, ಕೃತಕೃತ್ಯರಾಗಿರಿ!

ಬಡತನವೆಂಬ ರೋಗಕ್ಕೆ ಮುಖ್ಯವಾದ ಔಷಧಿಯೇ ವ್ಯಾಪಾರ, ಕೃಷಿ, ಕೈಗಾರಿಕೆ ಈ ತತ್ವವನ್ನು ತಿಳಿದವರಾದ ಪಾಶ್ಚಾತ್ಯರು ಈ ವಿಷಯದ ಅಭಿವೃದ್ಧಿಗಾಗಿ ಅಹರ್ನಿಶಿ ಪ್ರಯತ್ನಿಸುತ್ತಿರುವರು. ಈ ವಿಷಯಕ್ಕಾಗಿ ಅವರೆಷ್ಟೋ ಸಹಸ್ರ ಬಂಧುಗಳನ್ನೂ ಕಳೆದುಕೊಂಡಿರುವರು. ಹಿಡಿದ ಕೆಲಸದ ಸಫಲತೆಗಾಗಿ ಎಷ್ಟು ಜನರ ಜೀವ ಹೋದರೂ, ಮತ್ತೂ ಪ್ರಯತ್ನಿಸುತ್ತಿರುವರು. ವ್ಯಾಪಾರ ವಹಿವಾಟುಗಳ ಆಧುನಿಕ ಸೌಕರ್ಯಗಳಿಗಾಗಿ ಎಷ್ಟೋ ಕೋಟಿ ರೂಪಾಯಿಗಳನ್ನು ವೆಚ್ಚಮಾಡುತ್ತಿರುವರು. ತಮ್ಮ ದೇಶದ ಉನ್ನತಿಗಾಗಿ ಅವರಾವ ಅಗಾಧ ಕಾರ್ಯವನ್ನಾದರೂ ಮಾಡಲು ಹಿಂಜರಿಯರು. ದೇಶಪ್ರೇಮ, ಸ್ವಜನ ವಾತ್ಸಲ್ಯ, ಸ್ಥಿರ ಪ್ರಯತ್ನವೇ ಮೊದಲಾದ ಸುಗುಣಗಳನ್ನೇ ನಾವು ಅವರಿಂದ ಕಲಿತುಕೊಂಡು, ಅವರನ್ನನುಸರಿಸಲು ಪ್ರಯತ್ನಿಸಬೇಕಲ್ಲದೆ, ಬರೇ ಡಾಂಭಿಕವಾದ ವೇಷಭೂಷಣಗಳಿಂದಲ್ಲ "Not Imitation but creation is our aim" ಎಂಬೀ ತತ್ವವನ್ನೇ ಪ್ರತಿಯೊಬ್ಬ ಭಾರತೀಯನೂ ಅನುಸರಿಸಿದ ದಿನವೇ ಸುದಿನವು.

ಪಾಶ್ಚಾತ್ಯರಿಗೆ ಸರಕಾರದ ಬೆಂಬಲವಿದೆ, ಸಹಾಯವಿದೆ, ಪ್ರೋತ್ಸಾಹವಿದೆ ಆದರೆ ನಮ್ಮಂತಹ ನಿರ್ಭಾಗ್ಯರಿಗೆ ಅಂಥಾ ಸುಯೋಗವಿಲ್ಲ. ಹಾಗಿದ್ದರೂ ಮಾನವ ಜನ್ಮದಲ್ಲಿ ಜನನಕ್ಕೆ ಬಂದು ಮನುಷ್ಯೋಚಿತವಾದ ಕರ್ತವ್ಯವನ್ನು ನಾವೇಕೆ ಬಿಡಬೇಕು?

ಅತ್ತ ನೋಡಿರಿ! ನಿಸ್ವಾರ್ಥಪರರಾಗಿ ತನ್ನ ಸರ್ವಸ್ವವನ್ನೂ ಬಡವರ ಸೇವೆಗಾಗಿ ಅರ್ಪಿಸಿ, ತನ್ನ ಸುಖಭೋಗಗಳನ್ನು ತ್ಯಜಿಸಿ, ಕಾರಾಗ್ರಹವನ್ನು ಪ್ರವೇಶಿಸಿ ಬಡವರ ದುಃಖ ನಿವಾರಣೆಗಾಗಿ ಪ್ರಯತ್ನಿಸುತ್ತಿರುವ ಮಹಾತ್ಮಾ ಗಾಂಧಿಜೀಯವರು ನಮ್ಮ ಸಹಾಯಕರಲ್ಲವೇ? ಇವರ ಹೊರತು ಪಂಡಿತ ಮಾಲವೀಯ, ನೆಹರೂ ಮೊದಲಾದ ಧುರೀಣರು ಕೂಡ ತಮ್ಮ ಸರ್ವಸ್ವವನ್ನು ಸಮರ್ಪಣೆಗೈದು, ಬಡವರ ಬಂಧುಗಳಾಗಿಲ್ಲವೆ? ನಮಗಿನ್ನೇನು ಭಯ?

ಬಡವರ ಸೇವೆಗಾಗಿ ಮಹಾತ್ಮಾಜೀಯವರೇ ಮೊದಲಾದವರು ಯಾವ [illegible] ವ್ರತವನ್ನು ಧಾರಣೆಮಾಡಿಕೊಂಡಿರುವರೋ, ಅದೇ [illegible] ಯನ್ನೂ ಅನುಸರಿಸಿ, ಬಡತನವೆಂಬ ಪಿಶಾಚಿಯನ್ನು ದೂರ ಮಾಡಲು [illegible] ಸುವಂತೆ ಆ ಪರಂಜ್ಯೋತಿಯಾದ ಭಗವಂತನು ನಮಗೆಲ್ಲರಿಗೆ ಶಕ್ತಿಯನ್ನು ದ[illegible]

++ ○ ++

# (ಟಿಟ್-ಬಿಟ್ಸ್) ಮೈಸೂರು ನರ್ಸಣ್ಣನಿಗೆ ಬುದ್ಧಿವಾದ. (TIT-BITS)

**‘ಮೈಸೂರ್ ನರ್ಸಣ್ಣ’ನ ಲೇಖನ ಸಂಬಂಧವಾಗಿ ಮಿ| ಜೋರ್ಜ್ ಹರ್ಬರ್ಟರು ಫೆಬ್ರವರಿ ತಾ. 21ರಲ್ಲಿ ‘ಬಡವರ ಬಂಧು’ ಸಂಪಾದಕರಿಗೊಂದು ಬಂಧುಭಾವ ಸೂಚನಾ ಪತ್ರವನ್ನು ಬರೆದಿದ್ದರು. ಆ ಪತ್ರವನ್ನು ಸಂತೋಷಪೂರ್ವಕವಾಗಿ ಸ್ವೀಕರಿಸಿ, ಅದು ತನಗೆ ತಲಪಿದ ವಿಷಯವನ್ನು ಈ ಸಲದ ‘ಬಡವರ ಬಂಧುವಿ’ನಲ್ಲಿ ಪ್ರಕಟಿಸಲಾಗುತ್ತದೆಯೆಂದು ಸಂಪಾದಕರು ಅವರಿಗೆ ತಾ.23ನೇ ದಿನ ಬರೆದು ಉತ್ತರ ಕೊಟ್ಟರು. ಹಿತೈಷಿಗಳೊಡನೆ ವಿವಾದ ಏಕೆ? ವೈಯಕ್ತಿಕವಾಗಿ ಮಿ| ಹರ್ಬರ್ಟರೂ ಸಂಪಾದಕರೂ ಮಿತ್ರರೇ ಇರುತ್ತೇವೆ. ‘ಮೈಸೂರ್ ನರ್ಸಣ್ಣ’-ಮಿ| ಜೋರ್ಜ್ ಹರ್ಬರ್ಟರೊಳಗೆ ವಿವಾದವಿಲ್ಲದೆ, ಮುಂದಕ್ಕೆ ಮೈತ್ರಿಯು ಉಳಿದು ಬಡವರ ಶ್ರೇಯಸ್ಸುಂಟಾಗಲೆಂದು ಹಾರೈಸುವೆವು.**

**ಸಂಪಾದಕ.**

ಪ್ರಿಯ ಮೈಸೂರ್ ನರ್ಸಣ್ಣ! ‘ಬಡವರ ಬಂಧು’ವು ಎಳೆ ವಯಸ್ಸಿನ ಪತ್ರಿಕೆಯಾಗಿರುವುದಾದರೂ ನಿನ್ನ ಪ್ರತಾಪದಿಂದಾಗಿ ನಿನ್ನ ಹೆಸರೂ ನಮ್ಮ ಪತ್ರಿಕೆಯ ಹೆಸರೂ ಕರ್ನಾಟಕದಲ್ಲಿ ಬಹಳ “ಖ್ಯಾತಿ”ಗೊಳ್ಳಲು ಕಾರಣವಾಗಿದೆ! ಸ್ತುತ್ಯ ಸಂಗತಿ! ಆದರೇನು? ಊರಲ್ಲೆಲ್ಲಾ ನಿನ್ನನ್ನು ‘ದೂರು’ತ್ತಿರುವರು. ನಿನ್ನ ಮೇಲಿನ ಪ್ರೇಮದಿಂದಲೋ ಹಗೆಯಿಂದಲೋ ತಿಳಿಯೆ. ನಿನ್ನ ಕಾಠಿಣ್ಯವು ಕಡಿಮೆಯಾಗಬೇಕು ಎಂದು ಸರ್ವಸಾಧಾರಣ ಅಭಿಪ್ರಾಯ. ನೀನು ವೈಯಕ್ತಿಕ ಟೀಕೆಗಳನ್ನು ಮೇರೆ ಮೀರಿ ಮಾಡುವವನೆಂದು ಹೆಚ್ಚಿನವರ ಅಭಿಪ್ರಾಯ. ಮೂಗುತುದಿಯನ್ನು ಕೆಂಪೇರಿಸುವ ನಿನ್ನ ನುಡಿಗಳು ಅಯೋಗ್ಯವಲ್ಲವಾದರೂ ಯೋಗ್ಯವೆಂದು ಹೇಗೆ ಹೇಳಲಿ?

ಈಗ ಬಡವರಲ್ಲಿ ಬಡವರಾದ ರೈತರ ದುರವಸ್ಥೆಯು ವರ್ಣನಾತೀತವಾಗಿದೆ. ಈ ಸಲದ ಫಸಲಿಯಲ್ಲಿ ಮದ್ರಾಸು ಸಂಸ್ಥಾನದ ಬಡ ರೈತರ ಕಂದಾಯ ವಸೂಲಾತಿಯಿಂದ ಸೇಕಡಾ ಹನ್ನೆರಡುವರೆಯಷ್ಟನ್ನಾದರೂ ದಯಮಾಡಿ ಬಿಡಬೇಕೆಂದು ಮದ್ರಾಸು ನ್ಯಾಯವಿಧಾಯಕ ಸಭೆಯಲ್ಲಿ ಬಹುಮತದ ಮೇರೆಗೆ ಠರಾವು ಚರ್ಚೆಯಾಗಿ ನಿರ್ಣಯಹೊಂದಿದಂತಾದರೂ, ನಮ್ಮ ಸರಕಾರವು ಮಾತ್ರ ಹಾಗೆ ಕಂದಾಯವನ್ನು ದುರವಸ್ಥೆಯ ವೇಳೆ ಕಡಿಮೆ ಮಾಡುವುದೂ, ಆರ್ಥಿಕ ಸುಸ್ಥಿತಿಯ ವೇಳೆ ಹೆಚ್ಚಿಸುವುದೂ ಪ್ರಕೃತವಲ್ಲವೆಂದು ಬಡ ರೈತರಿಗೆ ಯಾವ ರಿಯಾಯಿತಿಯನ್ನಾದರೂ ತೋರಿಸುವುದಿಲ್ಲವಾಗಿ ಖಂಡಿತವಾಗಿ ಅಂದುಬಿಟ್ಟದೆ! ದವಸಧಾನ್ಯಗಳಿಗೆ ಬೆಲೆ ಇಳಿದಿದೆ. ರೈತರು ಹಣರಹಿತರಾಗಿದ್ದಾರೆ. ಕಂದಾಯ ಕೊಡಲಂತಿರಲಿ, ಮುಡಿ ಕಟ್ಟಿಸುವುದಕ್ಕೂ ಅವರಲ್ಲಿ ಹಣದಭಾವವಿದೆ. ಕೆಲವು ರೈತರು ತಮ್ಮ ವೃತ್ತಿಗೆ ತಿಲಾಂಜಲಿಯನ್ನು ಕೊಡಲಿದ್ದಾರೆ. ಕಷ್ಟದ ವೇಳೆಯಲ್ಲಿ ಪ್ರಭುಗಳು ಪ್ರಜೆಗಳನ್ನು ಸಂರಕ್ಷಿಸುವುದು ಧರ್ಮವಿರುತ್ತದೆ, ಸಹಜ ನ್ಯಾಯವಿರುತ್ತದೆ. ಹಾಗಿರುವಾಗ ನಮ್ಮ ಸಂಸ್ಥಾನಸರಕಾರದ ನಿರ್ಧಾರಪೂರ್ವಕ ತಿರಸ್ಕಾರವು ಪ್ರಜೆಗಳನ್ನು ಸುಖಶಾಂತಿಗೊಳಿಸುವಂತಿಲ್ಲ. ಬಡವರ ಸಂಕಷ್ಟವನ್ನು ತಿಳಿದೂ ತಿಳಿದೂ ಕಣ್ಮುಚ್ಚುವುದೆಂದರೆ, ಅವರನ್ನು ಕೇಳುವ ಗತಿಯೂ ಇಲ್ಲದಂತಾದರೆ, ಮುಂದಕ್ಕೆ-ಜೀವಿಸುವುದಾದರೂ ಹೇಗೆ? ಸರಕಾರೀ ನೌಕರರ ಸಂಬಳದಿಂದ ಶೇಕಡಾ ೧೦ರಷ್ಟಕ್ಕೆ ಕತ್ತರಿ ಪ್ರಯೋಗ ಮಾಡಿದ ಸರಕಾರವು ಒಂದು ವರ್ಷದೊಳಗೆ ೧ ಕೋಟಿ ಉಳಿತಾಯವನ್ನು ಮಾಡಿದೆ. ಆ ಉಳಿತಾಯವನ್ನು ಬಡ ರೈತರ ಶ್ರೇಯಾಭಿವೃದ್ಧಿಗಾಗಿ ವಿನಿಯೋಗಿಸದೆ, ನೌಕರರ ಕಡಿದ ಸಂಬಳಕ್ಕೆ ಶೇಕಡಾ ೫ರಷ್ಟು ಕೂಡಿಸಿ ಕೊಟ್ಟು ಇದ್ದವನ ಮನೆ ತುಂಬಿಸಲು ನಮ್ಮ ದಯಾಳು ಸರಕಾರವು ನಿರ್ಧರಿಸಿದೆ. ರೈತರ ಕರುಣಾಜನಕ ಪರಿಸ್ಥಿತಿಯನ್ನು ದೇಶ ಪರದೇಶಗಳ ಪತ್ರಿಕೆಗಳೂ ಜನರೂ ಚಿತ್ರಿಸಿ, ಸರಕಾರವು ಹೇಗಾದರೂ ರಕ್ಷಿಸಬೇಕೆಂದು ಕೇಳಿಕೊಳ್ಳುತ್ತಿವೆ.

ಇಂತಹ ವಿಪನ್ನಾವಸ್ಥೆಯನ್ನು ಹೋಗಲಾಡಿಸುವುದಕ್ಕಾಗಿ ನೀನು ನಿನ್ನ ಶಕ್ತಿ ಮೀರಿ ಕೆಲಸಮಾಡಬಹುದು. ಕುಂದುಕೊರತೆಗಳು ಇದ್ದದ್ದನ್ನು ಇದ್ದಂತೆ ಹೇಳಿದರೆ ಈ ಕಾಲದಲ್ಲಿ ಮೆಚ್ಚುವವರು ವಿರಳ. ನಾವೂ ನೀನೂ ಬೇರೆಯವರಲ್ಲವಾದರೂ ಈ ಸೂಚನೆಯನ್ನು ಮಾಡದೆ ನಿರ್ವಾಹವಿಲ್ಲ. ಮುಂದಕ್ಕೆ ಎಲ್ಲರ ಮೈತ್ರಿಯನ್ನು ಬೆಳೆಸುವಿಯೆಂದು ಹಾರೈಸುವ ಹಿತಚಿಂತಕ,

**ಸಂಪಾದಕ.**

(ಮೈಸೂರು ನರ್ಸಣ್ಣನು ಬರೆದು ಇಟ್ಟಿದ್ದ ‘ಪಂಚಾಂಗ’ವನ್ನು ಈ ಸಲ ಮನ್ನಾ ಮಾಡಿ ಅವನಿಗೆ ಬುದ್ಧಿವಾದವನ್ನು ಹೇಳಿದೆ. ಇದಕ್ಕೆ ಅವನ ಉತ್ತರವು ಬರಲಿದೆ. ಪ್ರಕಟಣೆ ಬರುವ ಸಂಚಿಕೆಯಲ್ಲಿ. ಸಂ. ಬ. ಬ. )

---

೮ನೇ ಪುಟದಿಂದ ಮುಂದರಿಸಿದ್ದು.

ಮತ್ತೊಬ್ಬರು, “ದೇಶಭಕ್ತಿಯಂತೆ! ಹುಣಿಸೆಹಣ್ಣು! ಎಲ್ಲಾ ಬರೀ ಬೂಟಾಟಿಕೆ ! . . . , ನಾಳೆಯ ದಿನ ನೊವೆಂಬರ್ ಹನ್ನೊಂದನೆಯ ತಾರೀಖಿನ ದಿನ ಸಾವಿರಾರು ದೊಡ್ಡ ಮನುಷ್ಯರೆಲ್ಲಾ ‘ಸಿನೋಟಾಫಿ’ನ ಹತ್ತಿರ (ಯುದ್ಧದಲ್ಲಿ ಸತ್ತವರ ಸ್ಮಾರಕ ಮಂಟಪದ ಹತ್ತಿರ ಜೋಲುಮುಖ ಹಾಕಿಕೊಂಡು ನಿಲ್ಲುತ್ತಾರಲ್ಲ . . . . ಅದೇ ರಾತ್ರಿ ಹೋಗಿ ನೋಡಿ; ಚೆನ್ನಾಗಿ ಊಟಮಾಡಿ ಆನಂದದಲ್ಲಿ ಮುಳುಗಿ ತೇಲುತ್ತಿರುತ್ತಾರೆ. . . . . ಇದು ದೇಶಭಕ್ತಿಯೋ ಬೆಕ್ಕಿನ ವೇದಾಂತವೊ?” ಎಂದರು.

ಮತ್ತೊಬ್ಬರು, “ಅದೆಲ್ಲಾ ಹೋಗಲಿ! ಇನ್ನೊಂದು ಯುದ್ಧಕ್ಕೆ ಹೋಗುತ್ತೀರಿ?” ಎಂದು ಕೇಳಿದರು.

“ನಾನು ಬೇರೆ ಹೋಗೋಲ್ಲ.”

“ಹೋಗದಿದ್ದರೆ ಜೈಲಿಗೆ ಹಾಕುತ್ತಾರೆ.”

“ಹಾಕಹೇಳಿ; ಹೋಗಿ ಹಾಯಾಗಿ ಕುಳಿತ!”

ಇದುವರೆಗೆ ಸುಮ್ಮನಿದ್ದ ಒಬ್ಬರು ಈ ಕಂತೆಯೆಲ್ಲಾ ಇರಲಿ. ನಾಳೆ, ಜರ್ಮನಿಯರು ಒಂದು ಬಂದೂಕು ಹಿಡಿದು ನಿಮ್ಮ ಬಾಗಿಲನ್ನು ತಟ್ಟಿದರೆ ಏನು ಮಾಡುತ್ತೀರಿ?”

“ಹೆಂಡತಿ ಮಕ್ಕಳಿಗೋಸ್ಕರ ಹೊಡೆದಾಡುತ್ತೇನೆ.

“ಮನೆಯ ಮುಂದೆ ಹೊಡೆದಾಡೋರು, ನೀವು ಹೊರಗೆ ಹೋಗಿ ಯುದ್ಧದಲ್ಲಿ ಏಕೆ ಹೊಡೆದಾಡಬಾರದು” ಎಂದು ಕೇಳಿದರು.

ಅದಕ್ಕೆ ಅವರು “ಎರಡಕ್ಕೂ ವ್ಯತ್ಯಾಸವಿದೆ” ಎಂದರು.

ಮುದುಕರೊಬ್ಬರು, “ವ್ಯತ್ಯಾಸವೇನು ಬಂತು?. . . . ನಾನು ಅಂತಹ ಸಮಯದಲ್ಲಿ ಬಾಗಿಲು ತೆಗೆದು ಅವನನ್ನು ‘ಒಳಕ್ಕೆ ಬಾರಪ್ಪ!’ ಎಂದು ಹೇಳುತ್ತೇನೆ. . . .ಅಲ್ಲ ಸ್ವಾಮಿ, ಈ ಪ್ರಪಂಚದಲ್ಲಿ ಯಾವ ವಸ್ತುವಿಗೋಸ್ಕರ ಹೊಡೆದಾಡಬೇಕು? ನಮ್ಮ ಪ್ರಾಣಕ್ಕೆ, ತಾನೇ? . . . . ಒಂದು ವೇಳೆ ಅವನು ಅದನ್ನೂ ಕಿತ್ತುಕೊಂಡು ಹೋಗುತ್ತಾನೆ; ಅದನ್ನು ತೆಗೆದುಕೊಂಡು ಹೋಗಲೇಳಿ; ನಿಶ್ಚಿಂತೆಯಾಗುತ್ತೆ . . . . ನಾವೂ ಹೊಡೆದಾಡಿದರೆ ತಾನೇ, ಅವನೂ ಹೊಡೆದಾಡುತ್ತಾನೆ! ಸುಮ್ಮನಿದ್ದರೋ?” ಎಂದರು.

ಹೀಗಿಯೇ ಬಹಳ ಹೊತ್ತು ವಾದ ವಿವಾದಗಳು ನಡೆಯುತ್ತಿದ್ದುವು. ನನ್ನ ಗಡಿಯಾರ ತೆಗೆದು ನೋಡಿದೆ; ಒಂಬತ್ತುವರೆ ಗಂಟೆಯಾಗಿತ್ತು. ಇನ್ನು ತಿಂಡಿಗೆಲ್ಲಿ ತಕರಾರಾಗುತ್ತೆಯೋ ಎಂದುಕೊಂಡು ಗಾಬರಿಬಿದ್ದು ಹೊರಟು ಬಂದೆ. (ವಿ. ಕ.)

++ o ++

ಹಾಸ್ಯವನ್ನು ಅವಸರದಿಂದ ಓದುವುದಲ್ಲ. ಅದರಲ್ಲಿನ ಶಬ್ದಾರ್ಥವಲ್ಲದಗಿರುವ ಹಾಸ್ಯರಸವನ್ನು ಹೀರಬೇಕು.

# ಬಡವರ ಬಂಧು ಹಾಸ್ಯೌಷಧಾಲಯ.

ಹಾಸ್ಯಸಂಗ್ರಹಕಾರರು ಬೇಕಾಗಿದ್ದಾರೆ. ಉತ್ತಮ ಹಾಸ್ಯಗಳಿಗೆ "ಸುಸ್ವಾಗತ" ವಿದೆ.

ಡಾಕ್ಟರರು–ಜಾಡ್ಯದ ಓಡ್ಯಣ್ಣ, M. A. D., D. O. G.

**ಅತೀ ಅಗ್ಗ!** **ಮನೋರೋಗಕ್ಕೆ ಕೆಳಗಿನವು ದಿವ್ಯೌಷಧ.** **ನಗುವವರಿಗೆ ಧರ್ಮ!**

ದಾಸಯ್ಯನೊಬ್ಬನು ಕಳ್ಳನನ್ನು ಹಿಡಿದು "ಅಯ್ಯ ಮಹಾರಾಯಾ, ನಿನಗೆ ಕೆಲಸ ಮಾಡಲಿಕ್ಕೇನು ಜ್ವರ? ಕದ್ದು ತಿನ್ನುವುದೇಕೆ?

ಕಳ್ಳ:—ನೀನು ಕೆಲಸ ಮಾಡದೆ ಮನೆ ಮನೆ ಬೇಡಿ ತಿನ್ನುವುದೇಕೆ?

ದಾಸಯ್ಯ:—ನಮ್ಮದು ಹಳೆಯ ಕಟ್ಟಳೆ. ನನ್ನ ಹಿರಿಯರೆಲ್ಲರೂ ದೇವರ ಹೆಸರು ಹೇಳಿ ಶಂಖ ಊದಿ ಬೇಡುತ್ತಿದ್ದರು. ವಂಶಪಾರಂಪರ್ಯ ಬಂದ ವೃತ್ತಿಯನ್ನು ಬಿಡುವುದೆಂತು?

ಕಳ್ಳ:—ನನ್ನ ಹಿರಿಯರೂ ಕಳವು ಮಾಡಿಯೇ ಜೀವಿಸುತ್ತಿದ್ದರು. ನಮ್ಮದು ಕಳ್ಳ ಸಂತಾನ. ಅನಾಧಿಧರ್ಮವನ್ನು ಬಿಟ್ಟು ಪಾಪ ಕಟ್ಟಿಕೊಳ್ಳಬಾರದೆಂದೇ, ಒಂದೆರಡು ಮನೆಗಳಿಗೆ ಕನ್ನಹಾಕಿ ಸಿಕ್ಕಿದುದನ್ನು ಸಹದ್ಯೋಗಿಗಳೊಳಗೆ ಧರ್ಮದಿಂದ ಹಂಚಿ, ದೈವದೇವರುಗಳನ್ನು ಸಂತಸಪಡಿಸಿ, ಹಿರಿಯರ ಹೆಸರನ್ನು ಉಳಿಸಿಕೊಂಡು ಬರುತ್ತೇನೆ.

ಸಂಗ್ರಾಹಕ—ನಂದಳಿಕೆ ಲಕ್ಷ್ಮಣಶೆಟ್ಟಿ.

\+ \+ \+

ಉಪಾಧ್ಯಾಯ:—ರಾಮಾ, ವೈರ್‌ಲೆಸ್ wire-less) ಎಂದರೇನು?

ರಾಮು:—ಸಾರ್, ವೈರ್ ಎಂದರೆ ತಂತಿ. ಲೆಸ್ ಎಂದರೆ ಇಲ್ಲ. ನಮ್ಮ ಮನೇಲಿರುವ ವೀಣೆ ಸಹ ಈಗ ವೈರ್‌ಲೆಸ್ ಆಗಿದೆ.

\+ \+ \+ \+

ದಂಡ್ರಾಳಿ ಯುವಕ:—ಲೋ, ಆ ಅಂಗಡೀಲಿ ಒಬ್ಬಳು ಕಾಲೇಜು ಸ್ಟೂಡೆಂಟ್ ವ್ಯಾಪಾರ ಮಾಡ್ತಾ ಇದ್ದಾಳೆ. ನಡೀ, ನಾವೂ ಸ್ವಲ್ಪ ವ್ಯಾಪಾರ ಮಾಡಿ, ಹತ್ತಿರದಲ್ಲೇ ಅವಳನ್ನು ನೋಡಿ ಕಣ್ಣುಹೊಡೆದು ಬರೋಣ.

ಕೋಮಟಿ ಸ್ನೇಹಿತ:— ಛೀ! ಇದಕ್ಕೋಸ್ಕರ ದುಡ್ಡು ಬಿಚ್ಚಬೇಕೇನು? 100 ರೂ· ನೋಟಿಗೆ ಚಿಲ್ಲರೆ ಇದೆಯೋ ಎಂದು ಆ ಅಂಗಡಿಯಲ್ಲೇ ಕೇಳಿದರಾಯಿತು. ಪುಗ್ಸಟ್ಟೆಯಾಗಿಯೇ ನಮ್ಮ ಏರ್ಪಾಡು ಜರಗುತ್ತಲೊ?

ಲೇ:—ಶ್ರೀ. ಎ. ಆರ್. ಆಚಾರ್ಯ, ಬೊಂಬಾಯಿ.

\+ \+ \+ \+

ಒಬ್ಬ:—ನೀವು ನಿಮ್ಮ ತಾಯಿಗೆ ಎಷ್ಟು ಮಂದಿ ಮಕ್ಕಳು?

ಹುಡುಗ:—ನಾವು ಒಟ್ಟು 7 ಮಂದಿ ಮಕ್ಕಳು.

ಒಬ್ಬ:—ಏಳು ಮಂದಿಗಳಲ್ಲಿ ತಂದೆಗೆಷ್ಟು? ತಾಯಿಗೆಷ್ಟು? \+ \+ \+

ರಾಜ: ದನದ ಕುಂಡೆಯ ಕಡೆಗೆ ಏಕೆ ಇಣಿಕುತ್ತೀ.

ತೇಜ:—ಅಲ್ಲ ಕಾಣೋ! ಈ ದನವು ಈಗ ತಾನೇ ಉದ್ದದೊಂದು ಕಬ್ಬಿನ ಜಲ್ಲೆಯನ್ನು ನುಂಗುತ್ತಾ ಬಂತು. ಅದೀಗ ಈ ಕಡೆಯಿಂದ ಹೊರಬರುವುದೋ ನೋಡುವುದು.

ಶ್ರೀ. ಬಿ. ದೇವಪ್ಪ.

\+ \+ \+ \+

ಮಗು:—ಅಪ್ಪಾ, ನೀವು ಮೇಜಿನ ಮೇಲಿಟ್ಟ ಮಸಿಗೆ ಬಹಳ ಜಾಸ್ತಿ ಕ್ರಯವೇ?

ತಂದೆ:—ಇಲ್ಲ ಮಗೂ, ಅದಕ್ಕೆ ಬುಟ್ಟಿಯೊಂದಕ್ಕೆ ಬರೇ ಒಂದಾಣೆ ಮಾತ್ರ. ಯಾಕೆ ಮಗು?

ಮಗು:—ಹಾಗಾದರೆ ನನ್ನ ಬಿಳೇ ಅಂಗಿಯ ಮೇಲೆ ನಾನು ಒಂದೇ ಒಂದು ಬೊಟ್ಟು ಮಸಿಯನ್ನು ಚೆಲ್ಲಿಕೊಂಡದುದಕ್ಕೆ ನಮ್ಮವ್ವ ನನ್ನನ್ನೇಕೆ ಹೊಡೆಯುವಳು?

\+ \+ \+ \+

ಪೋಲೀಸ್—ನೀನು ಈ ರಾತ್ರಿ ಕಾಲದಲ್ಲಿ ಈ ಅಂಗಡಿಯ ಬೀಗದ ಹತ್ತಿರ ನಿಂತುಕೊಂಡು ಏನು ಮಾಡುತ್ತಿಯೇ?

ಕಳ್ಳ:—ಏನೂ ಇಲ್ಲ ಬುದ್ಧಿ. ನನಗೆ ದಾರಿಯಲ್ಲೊಂದು ಬೀಗದ ಕೈ ಸಿಕ್ಕಿತು. ಅದು ಯಾರದ್ದಾಗಿರಬಹುದೆಂದು ಕಂಡು ಹಿಡಿದು ಅದರ ವಾರಿಸುದಾರರಿಗೆ ಅದನ್ನು ಹಿಂದೆ ಕೊಡಲಿಕ್ಕಾಗಿ ಒಂದೊಂದೇ ಅಂಗಡಿಯ ಬೀಗಕ್ಕೆ ಹಾಕಿ ಪರೀಕ್ಷಿಸುತ್ತಾ ಇದ್ದೇನೆ.

ತಿ. ದೂತ.

ಡಾಕ್ಟರರು:—ಚಾಕರನೊಡನೆ 'ಟೀ ತಾರೋ' ಸೇವಕ ಹಾಲುಹಾಕದೆ 'ಟೀ' ತಂದುಕೊಟ್ಟ.

ಡಾಕ್ಟರರು:—ಏನೋ ಮುಂಡೇ ಗಂಡ! ಇದಕ್ಕೆ ಹಾಲು ಯಾಕೆ ಹಾಕಲಿಲ್ಲವೋ?

ಸೇವಕ:— (ಹೆದರುತ್ತಾ) ಸ್ವಾಮಿ, ತಾವೀಗ ಒಬ್ಬ ರೋಗಿಗೆ ಔಷಧಿ ಕೊಟ್ಟಾಗ, "ಒಂದು ವೇಳೆ ಹಾಲು ಸಿಗದಿದ್ದರೆ ಬರೇ ನೀರಲ್ಲಿ ಹಾಕಿ ಕುಡಿದರೂ ಪರ್ವಾ ಇಲ್ಲ" ಎಂದಿರಿ. ಹಾಲು ಇಲ್ಲದಿದ್ದುದಕ್ಕಾಗಿ ನಾನೂ ಬರೇ ನೀರು ಹಾಕಿದ್ದೇನೆ

ಮೈ ಮೆಗಜಿನ್.

\+ \+ \+ \+

ವಕೀಲ:—ನೀನು ವಾದಿಯಿಂದ ರೂಪಾಯಿ ಸಾಲ ಪಡಕೊಂಡದ್ದು ನಿಜವೋ?

ಪ್ರತಿವಾದಿ:—ಹೌದು ಸ್ವಾಮಿ!

ವಕೀಲ:—ಏಕೆ ಸಾಲ ತೆಗೆದುಕೊಂಡದ್ದು?

ಪ್ರ. ವಾ:—ತಮ್ಮ ಹೆಂಡತಿ ಮಕ್ಕಳ ಹೊಟ್ಟೆ ಹೊರಲಿಕ್ಕೆ!

ವಕೀಲ:—ಏನು! ನನ್ನ ಹೆಂಡತಿಮಕ್ಕಳ ಹೊಟ್ಟೆ ಹೊರಲಿಕ್ಕೆ?

ಪ್ರ. ವಾ—ಹೌದು ಸ್ವಾಮಿ! ನಾನು ಸಾಲಪಡಕೊಂಡದ್ದರಿಂದಲ್ಲವೇ ತಮಗಿಂದು ರುಸುಂ ಸಿಕ್ಕಿತು? ನನ್ನಂತಹರು ಸಾಲ ಪಡಕೊಳ್ಳದಿದ್ದರೆ ತಮ್ಮಂತಹರ ಗತಿ ಏನಾಗಬೇಕಿತ್ತು?

\+ \+ \+ \+

ಗೋವಿಂದ:—ನೀನು ಸೈಕಲ್ ಸವಾರಿ ಮಾಡಬೇಡ. ಅದರಲ್ಲಿ ನಿನ್ನ ಎದೆಗೆ ಬಹಳ ಕೆಡುಕುಂಟು.

ರಾಮು:—ನಿಜ· ನನ್ನ ಎದೆಯ ಕೆಡುಕನ್ನು ನೆನ್ನಸುತ್ತಾ ಸೈಕಲ್ ಸವಾರಿ ಮಾಡುವುದನು ಬಿಟ್ಟುಬಿಟ್ಟರೆ, ಸೈಕಲ್ ಡೀಲರರ ಎದೆಯ ಕೆಳಭಾಗಕ್ಕೆ ಕೆಡುಕುಂಟು!

—ಶ್ರೀ .ಬಿ. ಬಾಲಕೃಷ್ಣ.

# ‘ಗಾಂಧಿ ಬಗ್ಗಲಿ! ನಾವು ಬಗ್ಗಲಾರೆವು’

—ಅಲ್ಲಹಾಬಾದಿನ ಸ್ವದೇಶಿ ಲೀಗಿನಲ್ಲಿ ಭಾಷಣ ಮಾಡುತ್ತಾ ಸರ್ ತೇಜ ಬಹದ್ದೂರ್ ಸಪ್ರೂಗಳವರು ಇನ್ನು ಮುಂದಕ್ಕೆ ನಮ್ಮ ದೇಶದಲ್ಲಿ ನಿರುದ್ಯೋಗವು ಪ್ರಬಲವಾಗಲಿದೆ. ಆದುದರಿಂದ ಯುವಕರು ವ್ಯಾಪಾರ ವಾಣಿಜ್ಯಗಳಿಗೆ ಕೈ ಹಚ್ಚಿ ಎಂದರು! ಬೆರಿಸ್ಟರ್ ಕೆಲಸ ಆದೀತೆ?

—ಅಖಿಲ ಭಾರತ ಕೊಂಗ್ರೆಸು ಮಹಾ ಸಭೆಯು ಈ ವರ್ಷ ಕಲ್ಕತ್ತದಲ್ಲಿ ಜರಗುವುದಾಗಿ ಮಾಲವೀಯರ ಹೇಳಿಕೆ. ಪೋಲೀಸರು ಇಲ್ಲದಿದ್ದರೆ ಆಗಬಹುದು.

ಮೂರನೇ ಪಂಗಡವಾಗಿ ೧೫ ಮಂದಿ ಕ್ರಾಂತಿಕಾರ ಕೈದಿಗಳನ್ನು ಅಂದಮಾನಕ್ಕೆ ಮಹಾರಾಜಾ ಹಡಗಿನ ಮೂಲಕ ಒಯ್ದರು! ತಾವು ಮಹಾರಾಜರಾದೇವೆಂದೋ!

—ಶ್ರೀ ರಂಗ ಅಯ್ಯರರು ದೇವಸ್ಥಾನಪ್ರವೇಶ ಬಿಲ್ಲಿಗೆ ಎಲ್ಲರೂ ಕೈಗೊಟ್ಟು ನಡೆಸ ಬೇಕೆಂದು ಗಾಂಧಿಜೀಯವರ ತಂತಿ ಹೋಗಿದೆ! ಸನಾತನಿಗಳಿಗೆ ಕಾಲ!

—ಗುಂಟೂರಿನ ರೆಪಲೆ ತಾಲೂಕಿನಲ್ಲಿ ಮಂತಿಸರವರಿಪಲೇವ್ ಎಂಬ ಕ್ಷತ್ರಿಯ ದೇವಸ್ಥಾನವು ಹರಿಜನರಿಗಾಗಿ ತೆರೆಯಲ್ಪಟ್ಟಿತು! ಸಂತೋಷ!

—ಪಂಜಾಬ ಪಂಚಮರ ಸಭೆಯೊಂದು ಜರಗಿ “ಕೂಡಲೇ ಗಾಂಧಿಜೀಯವರನ್ನು ಬಂಧ ವಿಮುಕ್ತ ಮಾಡಿರಿ” ಎಂದು ಠರಾವಾಯಿತು! ಕಾಗದದಲ್ಲಿ!!

—ಸ್ಪೈನ್ ದೇಶದ ಮಾಜಿ ಅರಸರಾದ ಕಿಂಗ್ ಆಲ್ಫೋನ್ಸರು ಮೈಸೂರಿಗೆ ಬರುವ ತಿಂಗಳಲ್ಲಿ ಬರುವರು!

—ಜಬ್ಬಲ್‌ಪುರದಲ್ಲಿ ಎರಡು ಬಾಯಿಗಳ ನಾಲ್ಕು ಕಣ್ಣುಗಳ ಎರಡು ಕಿವಿಗಳ ಒಂದು ಆಡಿನ ಮರಿಯಿದೆ. ಜನರದನ್ನು ನೋಡಲು ಕಾಸು ಕೊಟ್ಟು ಹೋಗುತ್ತಿದ್ದಾರೆ! ಕಲಿಯುಗದಲ್ಲಿ ಯಾವುದಕ್ಕೂ ಕಡಿಮೆಯಿಲ್ಲ.

—ಶ್ರೀಮತಿ ಕಸ್ತೂರಿ ಬಾಯಿಯವರು ಅಂದು ಮಂಗಳೂರಿಗೆ ಬಂದಿದ್ದು ಮೊನ್ನೆ ಬೊರ್ಸಾದಿನಲ್ಲಿ ದಸ್ತಗಿರಿ ಮಾಡಲ್ಪಟ್ಟು ಸಬರಮತಿ ಜೈಲಿನಲ್ಲಿ ಸೆರೆಯಾಗಿರಿಸಲ್ಪಟ್ಟರು. ಕಾಲದ ಮಹಿಮೆ!

—ಚಿತ್ತಗೊಂಗ್ ಶಸ್ತ್ರಪಿತೂರಿಯಲ್ಲಿ ಆರೋಪಿತನಾಗಿದ್ದ ಅಂಬಿಕಾ ಚರಣನೆಂಬವನಿಗೆ ಫಾಶಿ ಶಿಕ್ಷೆ ಕೊಟ್ಟರು. ಅಂಬಿಕೆಯು ಬಳಿ ಹೋಗಬೇಕಾಯಿತು.

—ಗ್ರೀಸ್ ದೇಶಕ್ಕೆ ಹಿಂದೂಸ್ಥಾನದಿಂದ ವಿಮಾನ ಮೂಲಕ ಹೋಗುವವರು ದಾಕು ಹಾಕಿಕೊಂಡು ಆ ಮೇಲೆ ಹೊರಡಬೇಕಂತೆ! ಅಲ್ಲಿಯವರು ದೇವತೆಗಳಿರಬಹುದು!

—ಮುಂಬಾಯಿ ಗಿರ್ಗಾಂ ಪೋಲೀಸ್ ಕೋರ್ಟಿನಲ್ಲಿ ಮಿ। ಅಬ್ದುಲ್ ರಹಿಮಾನ್ ಎಂಬ ದೊಡ್ಡ ಅಧಿಕಾರಿಯೊಬ್ಬರು ನಿಂತಿದ್ದರು. ಒಬ್ಬ ಸಿಪಾಯಿಯು ಅವರನ್ನು ತಳ್ಳಿ ಜಗಲಿಯಿಂದ ಹೊರದೂಡಿದನು! ಅವನು ಕುಡಿದಿರುವುದಿಲ್ಲ ತೋರುತ್ತದೆ!

—ಜರ್ಮನಿಯ ಸಾರ್ ಎಂಬಲ್ಲಿ ಒಂದು ಗ್ಯಾಸ್ ಹಂಡೆ ಒಡೆದು ನೂರು ಜನರು ಮಡಿದರು. ೧೦೦೦ ಜನರು ಘಾಯಗೊಂಡರು!

—ಕಿಂಗ್ ಆಲ್ಫೋನ್ಸರ ಪ್ರಥಮ ಪುತ್ರನೊಬ್ಬನು ಮೆಡ್ರಿಡ್‌ನಲ್ಲಿದ್ದು ತಂದೆಯ ಆಶಯಕ್ಕೆ ವಿರೋಧವಾಗಿ ಮೆಕ್ಸಿಕೋ ತರುಣಿಯೊಬ್ಬಳನ್ನು ವಿವಾಹವಾಗಲಿರುವನು! ಆದರ್ಶ ಪುತ್ರ ಈ ಯುಗದಲ್ಲಿ!

ಸರಗೋರ್ಥ ಎಂಬಲ್ಲಿ ಒಬ್ಬ ಗಂಡುಸು ನಿದ್ರಾಪರವಶಾನಾಗಿದ್ದಾಗ ಕೆಲ ಪುಂಡರು ರಾತ್ರಿ ಅವನನ್ನು ಸ್ತ್ರೀಯೆಂದು ಭಾವಿಸಿ ಎತ್ತಿಕೊಂಡು ಹೋಗಿ ಮೋ ಹೋದರು. ಅವನು ಆಗ ಸೀರೆಯುಟ್ಟಿದ್ದನೇ?

—ಶಂಘೈಯಲ್ಲಿ ಯುಲಿಯಾಸನೆಂಬೊಬ್ಬ ಸೀಪಾಯಿಯು ತನ್ನ ಮೋರೆಯು ಅಂದವಿಲ್ಲದಿರುವುದನ್ನು ಕಂಡು ನದಿಗೆ ಹಾರಿದನು. ಆ ಮೋರೆಯನ್ನು ಮೀನ ತಿನ್ನಲಿಕ್ಕೆ!

—ಇಟಲಿಯಲ್ಲಿ ಪ್ರತಿಯೊಬ್ಬನೂ ವಿವಾಹವಾಗಿ ಮಕ್ಕಳನ್ನು ಹೆಚ್ಚಿಸಬೇಕೆಂದು ಅಲ್ಲಿಯ ಅಧಿಪತಿಯಾದ ಸೀನಿಯರ್ ಮುಸೋಲಿನಿಯವರ ಆಜ್ಞೆ! ಇಲ್ಲಿ ಮಕ್ಕಳು ಬೇಡವೆನ್ನುತ್ತೇವೆ!

—ಮುಂಬಾಯಿಯ ಮುನಿಸಿಪಲ್ ಸ್ಕೂಲ್ ಕಮಿಟಿಯವರು ತಮ್ಮ ಮತಾರ ಹೆತ್ತವರು ಮಕ್ಕಳನ್ನು ಪ್ರಾಥಮಿಕ ಶಾಲೆಗೆ ಕಳುಹಿಸದಿದ್ದರೆ ಅವರ ಮೇಲೆ ದಾವಾ ನಡೆಸುತ್ತೇವೆಂದು ಹೇಳಿರುವರು! ಕಷ್ಟ!

—ಗಾಂಧಿಯವರ ಆಶ್ರಯದಿಂದ ಪೂನೆಯಲ್ಲಿ ‘ಹರಿಜನ’ವೆಂಬ ಇಂಗ್ಲಿಷ್ ವಾರಪತ್ರಿಕೆ ಹೊರಟಿದೆ. ಬೆನಾರಿಸ್‌ನಲ್ಲಿ ಸನಾತನಿಗಳ ಬೆಂಬಲವಾಗಿ ಮಾಲವೀಯರು ‘ಸನಾತನ ಧರ್ಮ ಪ್ರಚಾರ್’ ಎಂಬ ಹಿಂದೀ ವಾರ ಪತ್ರಿಕೆಯನ್ನು ಹೊರಡಿಸಿದ್ದಾರೆ! ಇವರೊಳಗೆ ಸ್ಪರ್ಧೆಯಿರಬಹುದೆ?

—ಚಳವಳವನ್ನು ಪುನರಾರಂಭಿಸುವುದಿಲ್ಲವೆಂದು ವಾಗ್ದಾನ ಮಾಡಿದ ವಿನಹ ಗಾಂಧಿಜೀಯವರನ್ನು ಬಿಡುಗಡೆ ಮಾಡುವುದಿಲ್ಲವೆಂದು ಭಾರತ ಮಂತ್ರಿಗಳು ಫಕ್ಕನೆ ಹೇಳಿ ಬಿಟ್ಟರು! ಹೇಳಿ—, ಬಿಟ್ಟಾರೇ?

—ಕಳೆದ ತಿಂಗಳಲ್ಲಿ ಮುಂಬಾಯಿ, ಜರ್ಮನಿ, ಕರಾಚಿ, ಕೊಲೊಂಬೊ, ಕಲ್ಕತ್ತ ಕೊಯಮುತ್ತೂರುಗಳಲ್ಲಿ ಬೆಂಕಿರಾಯನ ಹಾವಳಿಯಾಗಿ ಲಕ್ಷ ಲಕ್ಷ ರೂಪಾಯಿಗಳ ನಷ್ಟ!

—ಮುಂಬಾಯಿಯಲ್ಲಿ ಮೈಲಿಗೆ ರೋಗವು ದಶಂಬರದಲ್ಲಿ ಪ್ರಾರಂಭವಾಗಿ ಇಷ್ಟರ ತನಕ ೯೦೦ಕ್ಕಿಂತ ಹೆಚ್ಚು ಜನರು ಮೃತರಾದರು! ಹಿಂದೂ ಮುಸಲ್ಮಾನರ ಬದಲು ಮಾರಿಯಮ್ಮಳ ದಂಗೆ!

—ಹೈದರಾಬಾದಿನಲ್ಲಿ ಸ್ಪಿನಿ ಎಂಬ ಮಿಲಿಟರಿ ಅಫೀಸರನು ಕುದುರೆ ಸವಾರಿ ಮಾಡುತ್ತಿರುವಾಗ ಬಿದ್ದು, ಕುತ್ತಿಗೆ ಮುರಿದು ಪಾಪ! ಸಾಯಲೇಬೇಕಾಯಿತು!

—ಪಂಚಮಾಲ್ ಜಿಲ್ಲೆಯಲ್ಲಿ ಕತ್ತಲೆಯಲ್ಲಿ ಒಳಗೆ ಬರುತ್ತಿರುವುದು ಕಳ್ಳನೆಂದು ನೆನೆದು ಒಬ್ಬ ತಮ್ಮನು ಅಣ್ಣನನ್ನು ಹೊಡೆದು ಕೊಂದನು. ೮ ತಿಂಗಳ ಕಾರಾಗ್ರಹ ವಾಸ—ಪರಾಮೋಶಿಗೆ!

—ಬೆಂಗಳೂರಿನ ‘ನ್ಯೂ ವರ್ಲ್ಡ್ ಶೊ’ ಪ್ರದರ್ಶನದಲ್ಲಿ ಮುಹಮ್ಮದ ಪೈಗಂಬರರ ಚಿತ್ರವನ್ನು ಪ್ರದರ್ಶಿಸಿದುದಕ್ಕಾಗಿ ಮುಸ್ಲಿಮರು ಉದ್ರೇಕಗೊಂಡಿರುವರು! ಕಾರಣ?

—ಕಲ್ಕತ್ತಾ ಕೋರ್ಪರೇಶನಿನ ಮಾಜಿ ಕೌನ್ಸಿಲರರಾದ ಶ್ರೀ. ವಿಪಿನ ಬೆಹಾರಿ ಗಂಗುಲ್ಲಿ ಎಂಬ ಕ್ರಾಂತಿಕಾರ ಸಹಾಯಕರು ತಲೆತಪ್ಪಿಸಿರುವುದರಿಂದ ಪತ್ತೆಮಾಡಿ ಕೊಟ್ಟವರಿಗೆ ರೂ. ೫೦ರಿಂದ ೧೫೦೦ರ ವರೆಗಿನ ಇನಾಮನ್ನು ಕೊಡಲಾದೀತು ಎಂದು ಸರಕಾರವು ಪ್ರಕಟಿಸಿದೆ.

---

**ಹೊಲಿಯುವ ಸರಿಗೆ ದೊರಕದ್ದರಿಂದ ಈ ಸಲದ ಸಂಚಿಕೆಯನ್ನು ಹೊಲಿಯಲಾಗಲಿಲ್ಲ. (ಮೆನೇಜರ್).**

ಆಲ್ ಇಂಡಿಯಾ ಆಯುರ್ವೇದ ಮಂಡಲಿಯಲ್ಲಿಯೂ, ಮೈಸೂರು ಎಗ್ಜಿಬಿಷನ್‌ನಲ್ಲಿಯೂ ಸನ್ಮಾನವು ದೊರೆತಿರುವುದು.

# ರತನ್ ಮಿಶ್ರಿ ಹಲ್ವಾ (REGD.)

ಸೋದರರೇ,

ಈ ಕಾಲದ ಅನೇಕ ಯುವಕರು 20—30 ವರ್ಷ ವಯಸ್ಸಿನಲ್ಲೇ ಮುದುಕರಂತೆ ನಿಶ್ಯಕ್ತರಾಗಲು ಕಾರಣವೇನು? ಕೇವಲ ಆರಿ ತೀರಿದ ಯಜಮಾನರಂತೆಯೂ, ವೇದಾಂತ ಶಿರೋಮಣಿಗಳಂತೆಯೂ ನಿರುತ್ಸಾಹಕರಾಗಿ ಸಂಸಾರಸುಖವನ್ನು ಸ್ವಪ್ನದಲ್ಲಿ ಅನುಭವಿಸುವವರಂತೆ ಇರುತ್ತಾರೆ. ಇದಕ್ಕೆಲ್ಲವೂ ಸುಖಕ್ಕೆ ಬುಡವಾದ ಧಾತು ಕ್ಷೀಣವಾಗಿರುವುದೇ ಕಾರಣ. ಸ್ವಪ್ನ ಸ್ಖಲನ, ಶೀಘ್ರ ಸ್ಖಲನ, ಅಜೀರ್ಣ, ಮಲಬದ್ಧ, ನಿಶ್ಯಕ್ತತೆ, ಕೆಮ್ಮು, ಶ್ವಾಸ ಸಂಬಂಧ ವ್ಯಾದಿಗಳಿಂದ ಕೂಡಿ, ಸ್ತ್ರೀ ಸುಖವನ್ನೇ ಅರಿಯದೆ ತಮ್ಮೊಳಗೆ ತಾವೇ ಚಿಂತಿಸಿ, ಚಿಂತಿಸಿ, ನಿರುತ್ಸಾಹಕರಾಗಿರುತ್ತಾರೆ. ಅಂಥವರಿಗಾಗಿಯೇ ಈ ರತನ್ ಮಿಶ್ರಿ ಹಲ್ವಾ ಏರ್ಪಟ್ಟಿರುವುದು. ಸ್ತ್ರೀ ಪುರುಷರಾದಿಯಾಗಿ ಒಂದು ಮಂಡಲ ಸೇವಿಸಿದಲ್ಲಿ ನಶಿಸಿದ ಯೌವನವು ಪುನಃ ಬರುವುದಲ್ಲದೆ, ವಜ್ರ ಕಾಯರಾಗುವಿರಿ.

ಈ ಊರಿನಲ್ಲಿಯೆ ಅನೇಕ ಅಂಗಡಿಗಳಲ್ಲಿಯೂ ದೊರೆಯುವುದು. **ಕ್ರಯ 1 ಪೌಂ. 4—8—0. ½ ಪೌಂ. 2—8—0.**

ಉಪಯೋಗಿಸಿರುವ ಮಹಾಶಯರ ಅಭಿಪ್ರಾಯ

ಅಯ್ಯಾ, ನಾನು ಕಳೆದ ವರ್ಷ ೧॥ ಪೌಂಡು **ರತನ್ ಮಿಶ್ರಿ ಹಲ್ವಾ** ತರಿಸಿ ಸೇವಿಸಿದೆನು. ಇದರಿಂದ ನನಗೆ ಬಹಳ ಗುಣ ಕಂಡು ಬಂದಿತ್ತು. ದಯವಿಟ್ಟು ಅರ್ಧ ಪೌಂಡು ವಿ. ಪಿ. ಮೂಲಕ ಕಳುಹಿಸಿ.

*Sd.* ತುಂಗಾ ಸುಬ್ಬರಾವ್, ಜಮೀನ್‌ದಾರ್, ಪುತ್ತೂರು.
22—4—1931.



ಅಯ್ಯಾ, ನಾನು ೪—೫ ದಿನಗಳಿಂದ ಕೃಶತ್ವ ಹೊಂದುತ್ತಾ ಅಶಕ್ತನಾಗಿದ್ದೆನು. ಅನೇಕ ಔಷಧಗಳನ್ನುಪಯೋಗಿಸಿದೆನು. ಗುಣ ಕಂಡು ಬರಲಿಲ್ಲ. ನಂತರ **ರತನ್ ಮಿಶ್ರಿ ಹಲ್ವಾ**ವನ್ನು ೪೪ ದಿವಸ ಸೇವಿಸಿದೆನು. ಇದರಿಂದ ಬಹಳ ಆರೋಗ್ಯವಾಯಿತು.

*Sd.* ಬಿ. ಶ್ರೀನಿವಾಸಯ್ಯಂಗಾರ್, ಜೋಡಿದಾರ್, ಆನೆಕಲ್
1—10—1931.




# ಹಿಮಗಿರಿ ತೈಲ. (Regd.)

ಭಾರತೀಯರೇ,

ಸಾಮಾನ್ಯವಾಗಿ ಉಷ್ಣ ಪೈತ್ಯದಿಂದಲೇ ಅನೇಕ ವ್ಯಾದಿಗಳುಂಟಾಗುವುವು. ಅದರಲ್ಲಿಯೂ, ತಲೆ ನೋವು, ಕಣ್ಣುರಿ, ಕಣ್ಣಿನಲ್ಲಿಯೂ, ಮೂಗಿನಲ್ಲಿಯೂ ನೀರು ಸುರಿಯುವಿಕೆ, ತಲೆ ತಿರುಗುವಿಕೆ, ಕೆಮ್ಮು, ನಿಶ್ಯಕ್ತಿ, ತಲೆಭಾರ, ಅಂಗಾಂಗಗಳ ನೋವು, ಮಲಬದ್ಧ ಇವು ಮುಖ್ಯವಾದವು. ಈ ವ್ಯಾಧಿಗಳುಂಟಾಗಲು ಅತ್ಯುಷ್ಣವೇ ಪ್ರಧಾನವು. ಇದಕ್ಕಾಗಿಯೇ ಪೂರ್ವಿಕರು ವಾರಕ್ಕೊಂದಾವರ್ತಿ ಅಭ್ಯಂಜನ ಸ್ನಾನಮಾಡುತ್ತಿದ್ದರು. ಈ ಕಾಲದವರನೇಕರು ಅಭ್ಯಂಜನ ಸ್ನಾನವನ್ನೇ ಅರಿಯರು. ಇದು ಶುದ್ಧ ತಪ್ಪು. ಈ ದಿನವೇ ಹಿಮಗಿರಿ ತೈಲವನ್ನು ಕೊಂಡು ಸ್ನಾನಮಾಡಿ. ಆರೋಗ್ಯವಂತರಾಗಿರಿ. ದಿನಾಗಲೂ ಹೆಂಗಸರಾದಿಯಾಗಿ ತಲೆಗೆ ಸವರಿಕೊಂಡು ಬಾಚಿಕೊಂಡರೆ ಕೂದಲು ಕಪ್ಪಾಗಿಯೂ, ಉದ್ದವಾಗಿಯೂ ಬೆಳೆಯುವುದು

**ಕ್ರಯ 1—0—0. 0—8—0.**

**ಈ ಊರಿನ ಅನೇಕ ಅಂಗಡಿಗಳಲ್ಲಿಯೇ ದೊರೆಯುವುದು.**

*(Sd.)* **ದೇವುಡು, ಎಮ್. ಎ., ರವರ ಅಭಿಪ್ರಾಯ.** [15-2-'32.

"ಮಹಾಶಯರೇ—ತಾವು ಕಳುಹಿಸಿದ ಹಿಮಗಿರಿ ತೈಲವನ್ನು ಉಪಯೋಗಿಸಿದೆನು. ವಾಸನೆಯು ಇತರ ತೈಲಗಳಂತೆ ಇಲ್ಲದಿದ್ದರೂ ಅದರಲ್ಲಿರುವ ಮನೋಹರವಾದ ಅದ್ಭುತ ಗುಣವನ್ನು ವರ್ಣಿಸಲಸಾಧ್ಯವಾದದ್ದು. ಅಮೃತಾಂಜನದಂತೆ ದೇಶದಲ್ಲಿ ಇದು ಪ್ರಸಿದ್ಧಿಯಾಗುವುದೆಂದು ನಂಬಿರುವೆನು."

ಅಯ್ಯಾ, ನನಗೆ ಸುಮಾರು ಹತ್ತು ವರ್ಷಗಳಿಂದಲೂ ತಲೆನೋವು ತಲೆ ತಿರುಗುವಿಕೆ, ದೃಷ್ಟಿಮಾಂದ್ಯ, ಆಗಾಗ್ಯೆ ಬೀಳುವಿಕೆ, ಈ ವಿಧವಾದ ವ್ಯಾಧಿಗಳಿದ್ದುವು. ಇದಕ್ಕಾಗಿ ವಿಕ್ಟೋರಿಯಾ ಆಸ್ಪತ್ರೆಗೆ ಹೋದೆನು. ಅನೇಕ ಡಾಕ್ಟರುಗಳ ಹತ್ತಿರ ಹೋದೆನು. ಇದು ಜಾಗ್ರತೆ ಹೋಗುವ ವ್ಯಾಧಿಯಲ್ಲವೆಂದು ಅಭಿಪ್ರಾಯಪಟ್ಟರು. ಕಡೆಗೆ ಹಿಮಗಿರಿ ತೈಲವನ್ನು ಅಭ್ಯಂಜನಕ್ಕೆ ಉಪಯೋಗಿಸುತ್ತಾ ಬಂದೆನು. ಒಂದು ತಿಂಗಳಲ್ಲಿ ಈ ವ್ಯಾಧಿಯು ಗುಣವಾಗಿ ಆರೋಗ್ಯವಾಯಿತು. ಉಷ್ಣ ಶರೀರಗಳಿಗೆ ಇದು ಕಲ್ಪವೃಕ್ಷವಾದುದು.

*(Sd.)* ಕರ್ಣಾಟಕ ಕವಿರತ್ನ, ಹೊಸಕೆರೆ ಚಿದಂಬರಯ್ಯ,
ಭಕ್ತಬಂಧು ಕಾರ್ಯಾಲಯ, ಬೆಂಗಳೂರು.

**Selling Agents:—**

**A. Somappa & Co., Mangalore.**



**Ratan Misri Depot, Bangalore.**

Reg. No. M. 2771. "ಬಡವರ ಬಂಧು" ಮಂಗಳೂರು.



Printed by V. S. Kudva at the Sharada Press, Mangalore and published by Mangalore Jarappa at the Badavara Bandhu Office, Hampankatta, Mangalo